'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ
ಹಾರೈಸಿರುವ ಆಜೀವ ಸದಸ್ಯರ ಬಳಗ

1389 ಶ್ರೀ ಬಿ. ಎಸ್. ಪುಟ್ಟಸ್ವಾಮಿ, ಬಿ. ಇ.
ಆರ್. ಪಿ. ಸಿ ಲೇಔಟ್, ವಿಜಯನಗರ, ಬೆಂಗಳೂರು-40

1390 ಶ್ರೀ ಪಿ. ಎಸ್. ಮಲ್ಲಯ್ಯ
ರಾಜಾಜಿನಗರ, ಬೆಂಗಳೂರು-10

1391 ಶ್ರೀ ಎಂ. ಶಿವಣ್ಣ
ಬ್ಯಾಗಡದೇವನಹಳ್ಳಿ, ಬೆಂಗಳೂರು-6

1392 ಶ್ರೀ ವಿ. ಎಂ. ತೆಗ್ಗಿ
ಗುಳೆಗುಡ್ಡ, ಬಾದಾಮಿ ತಾ॥, ಬಿಜಾಪುರ ಜಿಲ್ಲೆ.

1393 ಶ್ರೀ ಹೆಚ್. ಎಸ್. ಶಾಂತಮೂರ್ತಿ
ಸಿದ್ಧಗಂಗಾ ಟೈಲ್ಸ್, ಪಾಂಡುರಂಗನಗರ, ತುಮಕೂರು-1

1394 ಶ್ರೀ ಎಂ. ಡಿ ಜಾಫರ್
ಮಹೀನ ಎಲೆಕ್ಟ್ರಿಕಲ್ಸ್, ಸಿರಾ, ತುಮಕೂರು ಜಿಲ್ಲೆ

1395 ಶ್ರೀ ಡಿ. ಆರ್. ಶಿವಪ್ರಕಾಶ್
ಕ್ವಾರ್ಟರ್ ನಂ. 1 ಎ-2, ಹೆಚ್. ಎಂ. ಟಿ, ಫ್ಯಾಕ್ಟರಿ,
ತುಮಕೂರು-4

1396 ಶ್ರೀ ಎಸ್, ಶಾಂತಯ್ಯ, ಶಿಕ್ಷಕರು
ಕಂಬಾಳು ನೆಲಮಂಗಲ ತಾ॥, ಬೆಂಗಳೂರು-ಜಿಲ್ಲೆ

1397 ಶ್ರೀ ಜಿ. ಎನ್. ಗಂಗಾಧರ
S/o ಶ್ರೀ ಜಿ. ನಂಜುಂಡಪ್ಪ ಸದಾಶಿವ ನಗರ ಬೆಂಗಳೂರು-6

1398 ಅಧ್ಯಕ್ಷರು/ಕಾರ್ಯದರ್ಶಿಗಳು ಆರೆಕೆರೆ
ಆಧ್ಯಾತ್ಮ ಆಲಯ ಗಂಗಾವತಿ ರಾಯಚೂರು-ಜಿಲ್ಲೆ

1399 ಶ್ರೀ ಎಸ್. ಆರ್. ಪ್ರಭು S/o ಶ್ರೀ ಎಸ್. ರೇವಣ್ಣ
ಬಿ ಪಿ. ಮೊಬೈಲ್ಸ್ ಹಿಂಬಾಗ, ಬಿ. ಎಚ್ ರಸ್ತೆ ತುಮಕೂರು-2

1400 ಶ್ರೀ ಜಿ. ಎಸ್ ವಿಜಯದೇವ್ ಪ್ರೊ॥ ಸೋಮೇಶ್ವರ ಟ್ರಾನ್ಸ್‌ಪೋರ್ಟ್
ಕೆ. ಗೊಲ್ಲಹಳ್ಳಿ ಬೆಂಗಳೂರು ಸೌತ್-4

(ಮುಂದುವರಿಯುತ್ತದೆ)

# ಸಿದ್ಧಗಂಗಾ

ಸಂಪುಟ-30. ಸಂಚಿಕೆ-5. ಮೇ-1993.

## ಶ್ರೀ ಸಿದ್ಧಗಂಗಾ ಗುರುಕರುಣ ಶ್ರೀವಿಧಿ.

ಕಾಯ ದಂಡಿಗೆ ಮಾಡಿ ಶಿರವ ಸೋರೆಯ ಮಾಡಿ
ನರವ ತಂತಿಯ ಮಾಡಿ ನುಡಿಸಯ್ಯ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಹಮ್ಮು ಬಿಮ್ಮನು ಕಳೆದು ಅಂಕು ಡೊಂಕನು ತೆಗೆದು
ಸೊಮ್ಮುತವ ಪದಕೆ ಸಲುವಂತೆ। ಸಲಹಯ್ಯ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಪದವಿ ಪದವಿಯೆಂದು ಪದವಿಗೆ ಹಂಬಲಿಸಿ
ಪದಗೆಟ್ಟು ಜಗವು ಅಳುತಿಹುದು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

‡‡ + ‡‡ ÷ ‡‡

—ಹೆಚ್. ವಿ. ವೀರಭದ್ರಯ್ಯ.



## ಶ್ರೀವಾಣಿ

ಒಬ್ಬ ಸುಲ್ತಾನನಿದ್ದ. ಪ್ರಜಾನುರಾಗಿಯಾಗಿದ್ದ. ಪ್ರಜಾವತ್ಸಲನಾಗಿದ್ದ. ಒಳ್ಳೆಯ ಆಡಳಿತಗಾರನೆನಿಸಿದ್ದ. ಧರ್ಮಿಷ್ಠನಾಗಿದ್ದುದಲ್ಲದೆ ಸಾಹಿತ್ಯಾಭಿಮಾನಿಯಾಗಿದ್ದ. ಸಮಯ ಸನ್ನಿವೇಶಗಳು ಸಿಕ್ಕಿದಾಗ ತನ್ನ ಬಂಧು ಬಳಗದವರಿಗೆ, ಪರಿಚಾರಕರಿಗೆ, ಆಡಳಿತದ ಸಿಬ್ಬಂದಿವರ್ಗದವರಿಗೆ ಚಿಕ್ಕಪುಟ್ಟ ಕಥೆಗಳನ್ನು ಹೇಳುವ ಪರಿ ಪಾಠವಿಟ್ಟುಕೊಂಡಿದ್ದ. ಜನರೂ ಸುಲ್ತಾನನನ್ನು ತುಂಬ ಪ್ರೀತಿಸುತ್ತಿದ್ದರು. ತಮ್ಮ ಸುಲ್ತಾನ ಹೇಳುವ ಕಥೆಗಳಲ್ಲಿ ಕಂಡುಬರುವ ತಾತ್ವಿಕಾಂಶವನ್ನು ಗ್ರಹಿಸುವಷ್ಟು ಸಂಸ್ಕಾರ ಜೀವಿಗಳಾಗಿದ್ದರು. ಒಂದು ಬಾರಿ ಸುಲ್ತಾನ ತನ್ನ ಬಂಧು ಬಾಂಧವರನ್ನು ಉದ್ದೇಶಿಸಿ ಪುಟ್ಟಕಥೆಯೊಂದನ್ನು ಹೇಳಿದ. ಇಸ್ಲಾಂ ಧರ್ಮದಲ್ಲಿ ಸತ್ತವರನ್ನು ಸ್ಮಶಾನಕ್ಕೆ ಕೊಂಡೊಯ್ಯುವಾಗ ಒಂದು ಪದ್ಧತಿಯಿದೆ. ಶವಸ್ನಾನದನಂತರ ಚಟ್ಟದ ಮೇಲಿಡುವ ಮೊದಲು ಕೈಕಾಲು ಮತ್ತು ದೇಹದ ಯಾವುದೇ ಭಾಗ ಹೊರಗೆ ಕಾಣಿಸದ ರೀತಿಯಲ್ಲಿ ಹೊಸವಸ್ತ್ರದಿಂದ ಮುಚ್ಚಿ ಹೂವು, ಸುಗಂಧದ್ರವ್ಯಗಳಿಂದ ಅಲಂಕರಿಸಿ ಮೌನಮೆರವಣಿಗೆಯಲ್ಲಿ ಕೊಂಡು ಹೋಗುತ್ತಾರೆ ಆದರೆ ನಾನು ಸತ್ತಾಗ ಹಾಗೆ ಮಾಡಬೇಡಿ. ನನ್ನೆರಡೂ ಕೈಗಳನ್ನು ಅಂಗೈಗಳು ಚಾಚಿ ತೆರೆದು ಕೊಂಡು ಹೊರಗೆ ಕಾಣುವಂತೆ ವ್ಯವಸ್ಥೆಮಾಡಿ, ಸ್ಮಶಾನಕ್ಕೆ ಕೊಂಡು ಹೋಗಿ ಎಂದು ಸುಲ್ತಾನನು ಹೇಳಿದನು. ಆದಕ್ಕೆ ಕುತೂಹಲಗೊಂಡ ಅವನ ಬಂಧುಗಳು ಕೇಳಿದರು. ಏಕೆ ಹಾಗೆಮಾಡಬೇಕು? ಎಂದು ಅಗ ಸುಲ್ತಾನನು ಹೇಳಿದ "ನಾನು ಬರುವಾಗ ಏನೂತಂಲಿಲ್ಲ, ಹಾಗೆಯೆ ಹೋಗುವಾಗಲೂ ಏನೂ ತೆಗೆದುಕೊಂಡು ಹೊಗುತ್ತಿಲ್ಲ ಎಂಬುದನ್ನು ನನ್ನೆಲ್ಲ ಪ್ರೀತಿಯ ಪ್ರಜೆಗಳಿಗೆ ತೋರಿಸಿಕೊಡಬೇಕಾಗಿದೆ" ಆದಕ್ಕಾಗಿ ಹಾಗೆಮಾಡಿ ಎಂದನು. ಸುಲ್ತಾನನ ಮಾತಿನ ಮಾರ್ಮಿಕತೆಗೆ ಎಲ್ಲರೂ ಮೆಚ್ಚಿದರು. ಆಳುವ ಜನಕ್ಕೆ ಸುಲ್ತಾನನ ಜೀವನದೃಷ್ಟಿ ಬಂದರೆ ಸಮಾಜ ಜೀವನದಲ್ಲಿ ಶಾಂತಿ ನೆಮ್ಮದಿಗಳು ನೆಲಸುವುದರಲ್ಲಿ ಸಂಶಯವಿಲ್ಲ.

[13-5-93 ರಂದು ಸಕಲೇಶಪುರದಲ್ಲಿ ಬಸವ ಜಯಂತಿ ಸಮಾರಂಭದ ಅಧ್ಯಕ್ಷಪೀಠದಿಂದ ಮಾಡಿದ ಆಶೀರ್ವಚನದಿಂದ ಸಂಗ್ರಹ]

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ
**ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ**

## "ವಜ್ರಮಹೋತ್ಸವ ನಿಧಿ ಸಮಿತಿ".

"ಶಿವಪಥವನರಿವಡೆ ಗುರುಪಥವೇ ಮೊದಲು"

ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ 60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

**ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :**
**4 ಕೋಟಿ ರೂಗಳ ವೆಚ್ಚದಲ್ಲಿ**
**ಬೃಹತ್ ವಿದ್ಯಾರ್ಥಿ ವಸತಿ ನಿಲಯ**
ಮತ್ತು
**ಬೃಹತ್ ಪ್ರಸಾದ ನಿಲಯ.**
(16-2-92) ರಂದು

ಭಾರತದ ರಾಷ್ಟ್ರಪತಿ **ಡಾ|| ಶ್ರೀ ಶಂಕರದಯಾಳ ಶರ್ಮ** ಮತ್ತು **ಲೋಕಸಭಾಧ್ಯಕ್ಷ ಶ್ರೀ ಶಿವರಾಜ್ ಪಾಟೀಲ್** ಇವುಗಳ ಶಿಲಾನ್ಯಾಸವನ್ನು ನೆರವೇರಿಸಿದ್ದಾರೆ.

5/-, 10/-, 25/-, 51/-, 101/-, 201/-, 501/-, 1001/ 5001/-, 10,001/-, 35,000 ರೂ.ಗಳ ಕೂಪನ್‌ಗಳು ನಿಧಿ ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

**ಬಿ. ಎಸ್. ಮುದ್ದಪ್ಪ, ಐ.ಎ.ಎಸ್,**
ಕಾರ್ಯಾಧ್ಯಕ್ಷರು,

**ಪದ್ಮಭೂಷಣ ಡಾ|| ಎಂ. ಸಿ. ಮೋದಿ,**
ಅಧ್ಯಕ್ಷರು,

**ಎಸ್. ಎಸ್. ಹಸಬಿ,**
ಕಾರ್ಯದರ್ಶಿಗಳು.

ವಜ್ರಮಹೋತ್ಸವ ಸಮಿತಿ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104.

## ಶ್ರೀ ಸಿದ್ಧಲಿಂಗೇಶ್ವರ ವಚನ

ಕ್ರಿಯೆಯಿಲ್ಲದ ಜ್ಞಾನ ಪ್ರಯೋಜನವಿಲ್ಲ!
ಜ್ಞಾನವಿಲ್ಲದ ಕ್ರಿಯೆಯು ಪ್ರಯೋಜನವಿಲ್ಲವಯ್ಯಾ!
ಅದು ಹೇಗೆಂದರೆ
ದೇಹವಿಲ್ಲದೆ ಪ್ರಾಣಕ್ಕೆ ಆಶ್ರಯವುಂಟೆ ಅಯ್ಯಾ?
ಪ್ರಾಣವಿಲ್ಲದೆ ಕಾಯಕ್ಕೆ ಚೈತನ್ಯವುಂಟೆ ಅಯ್ಯಾ?
ಕ್ರಿಯೆಯಿಲ್ಲದೆ ಜ್ಞಾನಕ್ಕೆ ಆಶ್ರಯವಿಲ್ಲ;
ಜ್ಞಾನವಿಲ್ಲದೆ ಕ್ರಿಯೆಗೆ ಆಶ್ರಯವಿಲ್ಲ.
ಕ್ರಿಯಾಜ್ಞಾನಪ್ರಕಾಶವಿಲ್ಲದೆ ಲಿಂಗಕ್ಕಾಶ್ರಯವಿಲ್ಲ.
ಇದು ಕಾರಣ
ಜ್ಞಾನ ಸಕ್ರಿಯೋಪಚಾರವಿರಬೇಕೆಂದಿತ್ತಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಜ್ಞಾನದಿಂದಲೇ ಕೈವಲ್ಯ. "ಜ್ಞಾನಾದೇವತು ಕೈವಲ್ಯಂ"-ಎಂಬ ಶೃತಿ ವಾಕ್ಯವು ಅತ್ಯಂತ ಪ್ರಸಿದ್ಧವಾಗಿರುವುದು. ಇದರ ಮೇಲಿಂದ ಕೆಲವರು ಕ್ರಿಯೆಗೆ ಮಹತ್ವವೇ ತೋರುವುದಿಲ್ಲ. ಕೇವಲ ಜ್ಞಾನವೊಂದರಿಂದಲೇ ಮುಕ್ತಿ ಸಾಧ್ಯ ಎಂದು ತಿಳಿದು ಕೊಂಡಿರುವರು. ಅನುಭಾವಿಗಳು ಮಾತ್ರ ಆನೆರಡರಲ್ಲಿಯೂ ಬಿಚ್ಚಲಿಕ್ಕೆ ಬಾರದ ಸಂಬಂಧವುಂಟೆಂದು ಹೇಳಿರುವರು. ದೇಹವಿಲ್ಲದ ಪ್ರಾಣ, ಪ್ರಾಣವಿಲ್ಲದ ದೇಹ ಉಪಯೋಗಕ್ಕೆ ಬಾರದಂತೆ, ಕ್ರಿಯೆಯಿಲ್ಲದ ಜ್ಞಾನ, ಜ್ಞಾನವಿಲ್ಲದ ಕ್ರಿಯೆ ಉಪಯುಕ್ತವಾಗುವುದಿಲ್ಲ. ಇಷ್ಟೇ ಅಲ್ಲ, ಜ್ಞಾನಕ್ಕೂ ಕ್ರಿಯೆಗೂ ಭೇದವೇ ಇರುವುದಿಲ್ಲ. ಜ್ಞಾನವೆಂದರೆ ತಿಳಿಯುವುದು; ಇದು ಕ್ರಿಯೆಯ ಅವ್ಯಕ್ತ ರೂಪ. ಕ್ರಿಯೆಯೆಂದರೆ ಮಾಡುವುದು, ಇದುಜ್ಞಾನದ ವ್ಯಕ್ತರೂಪ. ಅಂತೆಯೇ ಜ್ಞಾನ ಕ್ರಿಯೆಗಳ ಸಮಸಮುಚ್ಚಯವನ್ನೇ ಶರಣರು ಅಂಗೀಕರಿಸಿರುವರು. ನಮ್ಮ ಶರೀರವನ್ನೇ ನೋಡಿಕೊಳ್ಳೋಣ. ಇದರಲ್ಲಿ ಜ್ಞಾನೇಂದ್ರಿಯಗಳಷ್ಟೇ ಇರುವುದಿಲ್ಲ, ಕರ್ಮೇಂದ್ರಿಯಗಳೂ ಇರುವುವು. ಒಂದು ವೇಳೆ ಜ್ಞಾನೇಂದ್ರಿಯಗಳಷ್ಟೇ ಇದ್ದು ಕರ್ಮೇಂದ್ರಿಯಗಳಿಲ್ಲದಿದ್ದರೆ, ಕರ್ಮೇಂದ್ರಿಯಗಳಷ್ಟೇ ಇದ್ದು ಜ್ಞಾನೇಂದ್ರಿಯಗಳಿಲ್ಲದಿದ್ದರೆ ಜೀವನ ವ್ಯವಹಾರ ಸರಿಯಾಗಿ ಸಾಗುತಿತ್ತೇ! ಜ್ಞಾನ ಕ್ರಿಯೆಗಳು ಸಮನ್ವಯ ಹೊಂದಿದರೇನೇ ಜೀವನ ವ್ಯವಹಾರ ಸರಿಯಾಗಿ ಸಾಗ ಬಲ್ಲದು.

[ಕೃಪೆ ; ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ. ಎಡೆಯೂರು-ಗದಗ]

**ಸಿದ್ಧಗಂಗಾ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಮಠ - 572 104

ತುಮಕೂರು ಜಿಲ್ಲೆ

ಡಾ|| ಎಂ. ಎನ್. ಚನ್ನಬಸಪ್ಪ

ಪ್ರಧಾನ ಕಾರ್ಯದರ್ಶಿಗಳು

ಹಳೆಯ ವಿದಾರ್ಥಿ ಸಂಘ

* * *

ಪ|| ಚನ್ನಪ್ಪ ಎರೇಸೀಮೆ

ಪ್ರಧಾನ ಸಂಪಾದಕರು

* * *

ಹೆಚ್. ವಿ. ವೀರಭದ್ರಯ್ಯ

ಸಂಪಾದಕರು

* * *

ಬಿ. ವೀರಭದ್ರಯ್ಯ

ಪಿ. ಎನ್. ಚಂದ್ರಶೇಖರಯ್ಯ

ಎಂ. ರೇಣುಕಾರಾಧ್ಯ

ಸಂಪಾದಕ ಮಂಡಳಿ

* * *

ಹೆಚ್. ಬಿ. ಗಂಗಾಧರಯ್ಯ

ಪ್ರಕಾಶಕರು

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ

ಮುದ್ರಣಾಲಯ

ಮುದ್ರಕರು

* * *

ಶ್ರೀ ಸಿದ್ಧಗಂಗಾಕ್ಷೇತ್ರ

ಪ್ರಕಟಣೆಯ ಸ್ಥಳ

**ಚಂದಾ ವಿವರ**

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 300-00


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


" ಸಂಪಾದಕರು "

'ಸಿದ್ಧಗಂಗಾ' ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ

ತುಮಕೂರು ಜಿಲ್ಲೆ-572104.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ


## ಸಂಪಾದಕೀಯ

ಸನ್ಯಾಸ ದೊಡ್ಡದೋ ಸಂಸಾರದೊಡ್ಡದೋ ಎಂದು ಯಾರೋಕೇಳಿದರಂತೆ ಅದಕ್ಕೆ ಉತ್ತರವಾಗಿ " ಬೆಟ್ಟ ಹತ್ತುವುದು ದೊಡ್ಡದೋ " ಬೆಟ್ಟ ಹೊತ್ತು ನಿಲ್ಲುವುದು ದೊಡ್ಡದೋ" ಎಂದು ಪ್ರತಿಯಾಗಿ ಉತ್ತರಿಸಿದರಂತೆ. ದೊಡ್ಡದು, ಸಣ್ಣದೆಂಬುದಾಗಲಿ, ಶ್ರೇಷ್ಠ ಕನಿಷ್ಠವೆಂಬುದಾಗಲಿ ಸಾಪೇಕ್ಷ ಪದಗಳೆಂದಾದೀತು. ಇಂದ್ರಿಯ ನಿಗ್ರಹಮಾಡಿ ಕರಣ ವೃತ್ತಿಗಳನ್ನು ಅಡಗಿಸಿ ಲೋಕ ಮೋಹದಿಂದ ದೂರನಾಗಿ ನಿಲ್ಲುವ ಸನ್ಯಾಸ ಆತ್ಮಕಲ್ಯಾಣ ಸಾಧಕವಾದುದೆಂದೇ ಬಲ್ಲವರ ಅಭಿಪ್ರಾಯ. ಅಂತೆಯೇ ಸಂಸಾರ ಸುಖವನ್ನು ಅಲ್ಲಗಳೆಯದಂತೆ ಇಂದ್ರಿಯಗಳ ವ್ಯಾಪಾರವನ್ನು ಉದಾತ್ತ ಗೊಳಿಸಿ ಪವಿತ್ರವಾದ ಮಾರ್ಗದಲ್ಲಿ ನಡೆಯುವ ಸಂಸಾರವೇನೂ ತಿರಸ್ಕರಣೀಯವಲ್ಲವೆಂಬುದು ಜ್ಞಾನಿಗಳ ಅಭಿಮತ. "ಮರ್ತ್ಯವೆಂಬುದು ಕರ್ತಾರನ ಕಮ್ಮಟ"ವೆಂದು ಕರೆದಬಸವಾದಿ ಶರಣರು ಸಂಸಾರವನ್ನು ಯೋಗವೆಂದೇ ಗೌರವಿಸಿದರು 'ಮನಸ್ಸು ಹೆಣ್ಣಿನೊಳಗಾದರೆ ಲಗ್ನವಾಗಿಕೂಡುವುದು, ಮನಸ್ಸು ಮಣ್ಣಿನೊಳಗಾದರೆ ಕೊಂಡು ಆಲಯವ ಮಾಡುವುದು." ಎಂದರು. ಸನ್ಯಾಸಿಗಾಗಲಿ ಸಂಸಾರಿಗಾಗಲಿ ನೈತಿಕನಿಷ್ಠೆ ಮುಖ್ಯವೆಂಬುದನ್ನು ಒತ್ತಿ ಹೇಳಿದರು. ಆತ್ಮಕಲ್ಯಾಣ ಕಾಂಕ್ಷಿಯಾದ ಸನ್ಯಾಸಿ ಆಚಾರ್ಯ ನೆನಿಸಿದರೆ, ಲೋಕ ಕಲ್ಯಾಣಕ್ಕಾಗಿ ಶ್ರಮಿಸುವವನು ಪ್ರವಾದಿಯಾಗುತ್ತಾನೆ. ಪ್ರವಾದಿಯ ಬದುಕೆಂದೂ ಹೂವಿನ ಹಾಸಿಗೆಯಾಗಿರುವುದಿಲ್ಲ. ನಿಂದೆ, ನಿಷ್ಠೂರಗಳ ಕಲ್ಲು ಮುಳ್ಳುಗಳ ದುರ್ಗಮ ಪಥವೇ ಆಗಿರುತ್ತದೆ. ಆದರೆ ಪ್ರವಾದಿ ಅವುಗಳಿಗೆ ಹೆದರಿಕೊಂಡು ಜೀವಿಸುವವನಲ್ಲ. ನಾಳೆ ಬಪ್ಪದು ನಮಗಿಂದೇ ಬರಲಿ, ಇಂದು ಬಪ್ಪದು ನಮಗೀಗಲೆ ಬರಲಿ ಇದಕಾರಂಜುವರು, ಇದಕಾರಳುಕುವರು, ಮರಣವೇ ಮಹಾನವಮಿ" ಎಮಗೆ ಎಂದು ತನ್ನ ಗುರಿಯ ಕಡೆಗೆ ಹೆಜ್ಜೆ ಹಾಕುತ್ತಾನೆ. ಲೋಕ ಸಂಗ್ರಹಕ್ಕೆ ಪ್ರವಾದಿಯದಾಗಿರುತ್ತದೆ. ಅದಕ್ಕೇ ಅವನು ಬೆಟ್ಟವನ್ನು ಹತ್ತಿನಿಲ್ಲುವ ಆದರ್ಶಕ್ಕಿಂತ ಕ್ಷಣಕಾಲವಾದರೂ ಬೆಟ್ಟವನ್ನು ಹೊತ್ತು ನಿಲ್ಲುವ ಸಾಹಸಕ್ಕೆ ತೊಡಗುತ್ತಾನೆ ಲೋಕಕಲ್ಯಾಣ ಅಥವಾ ಸುಧಾರಣೆಯಲ್ಲಿ ತನ್ನ ಆತ್ಮ ಕಲ್ಯಾಣವನ್ನೂ ಕಾಣುತ್ತಾನೆ ತಾನು ಕಂಡಸತ್ಯದರ್ಶನವನ್ನು ಇತರರಿಗೂ ಕೊಡ ಬಯಸುತ್ತಾನೆ. ಪ್ರವಾದಿಗೆ ತನೊಬ್ಬನೆ ಕಲ್ಯಾಣ ಮುಖ್ಯವೆನಿಸುವುದಿಲ್ಲ. ಲೋಕದ ದುಃಖದುಮ್ಮಾನಗಳಿಗೆ ಸ್ಪಂದಿಸುವ, ಅವುಗಳ ನಿವಾರಣೋಪಾಯಗಳನ್ನು ಕಾಣುವ ಯತ್ನಶೀಲನಾಗುತ್ತಾನೆ ಅಂಥವನು ಸನ್ಯಾಸಿಯ ವೇಷಭೂಷಗಳನ್ನು ತೊಟ್ಟರು ವಿಧಿ ವಿಧಾನಗಳನ್ನು ಅಳವಡಿಸಿಕೊಂಡರೂ ಲೋಕಸಂಸಾರಿಯಾಗಿ ತಾನು ತೊಟ್ಟ ಸನ್ಯಾಸಕ್ಕೂ ಕೈಗೊಂಡ ಮಾರ್ಗಕ್ಕೂ ಪಾವಿತ್ರತೆಯನ್ನು ತಂದುಕೊಡುತ್ತಾನೆ. ಬಸವಾದಿಶರಣರು ಅಂತಹಮಾರ್ಗವನ್ನು ತೆರೆದುತೋರಿದರು.

ಸಂಸಾರಿಗಳಾಗಿದ್ದು ಸನ್ಯಾಸಿಗಳಿಗಿಂತಲೂ ಶ್ರೇಷ್ಠರಾಗಿ ಬಾಳಿ ಬೆಳಸಿದರು. ಆ ಪರಂಪರೆಯಲ್ಲಿ ಬಂದು ಎಲ್ಲರಲ್ಲವಾದರೂ ಕೆಲವರಾದರೂ ಸನ್ಯಾಸಿಗಳು, ಸಂಸಾರಿಗಳು "ಸಹಜ ಸುಂದರ"ವಾಗಿ ಕಂಗೊಳಿಸುತ್ತ ಬಂದಿದ್ದಾರೆ. ಸಂಸಾರ ತಿರಸ್ಕರಣೀಯವಲ್ಲ, ಸನ್ಯಾಸ ಅನುಸರಿಸಲಾರದುದಲ್ಲ. ಎಲ್ಲರಮಧ್ಯದಲ್ಲಿದ್ದೂ, " ವಿರಕ್ತ " ನಾಗಿರುವುದು ದೊಡ್ಡದಲ್ಲವೆ? 'ಸನ್ಯಾಸವೂ ದೊಡ್ಡದೇ, ಸಂಸಾರವೂ ದೊಡ್ಡದೆ' "ನಿರ್ಲಿಪ್ತ"ವಾಗಿ ಬದುಕಿದಾಗ ಎಂದಲ್ಲವೆ ಜ್ಞಾನಿಗಳು ಹೇಳಿದ್ದು.

# ನಮ್ಮ ಪರಿಗಣನೆ

–ಹೆಚ್. ಶಿವರಾಂ, ಸುಬ್ಬರಾವ್ ಕಾಲೊನಿ, ಕೆ.ಆರ್. ಪುರಂ ರಸ್ತೆ, ಶಿವಮೊಗ್ಗ.

ಇಂದು ನಮ್ಮ ರಾಷ್ಟ್ರೀಯತೆಯು ಕಲ್ಪನೆ ಮಸಕು ಮಸಕಾಗಿದೆಯೆ? ಎಂಬ ಪ್ರಶ್ನೆಗಳು ಕೇಳ ಬರುತ್ತಿವೆ. ನಮ್ಮ ಗಣರಾಜ್ಯ ವಿಭಜಿತವಾಗಿಲ್ಲ. ವಿಭಜಿತವಾಗಿರುವುದು ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವ. ಯಾಕೆಂದರೆ, ಸಾಮಾನ್ಯ ವ್ಯಕ್ತಿ ದಿಕ್ಕೆಟ್ಟವನಂತೆ ವರ್ತಿಸುತ್ತಿದ್ದಾನೆ. ಎಷ್ಟೋ ಸಂದರ್ಭಗಳಲ್ಲಿ ಅವನು ಸೂತ್ರದ ಬೊಂಬೆಯಾಗುತ್ತಾನೆ. ನಿರ್ಭಾವುಕ ಯಂತ್ರವಾಗಿರುತ್ತಾನೆ. ಇನ್ನೂ ಕೆಲ ವಿಲಕ್ಷಣ ಹಾಗೂ ವಿಚಿತ್ರ ವ್ಯಕ್ತಿಗಳ ಮಾತಂತು ಹೇಳುವುದೇ ಬೇಡ. ಮಧ್ಯೆ ವಿಚಾರ ಪರರು ವಿಶಾಲ ಹೃದಯಿಗಳಾದವರು ಅಸಹಾಯಕರೂ ನಿರ್ಲಿಪ್ತರೂ ಆಗುತ್ತಿದ್ದಾರೆ.

ಪರಕೀಯರನ್ನು ಅಹಿಂಸೆಯಿಂದಲೆ ಹೊರಗೆ ಅಟ್ಟಿ ಸ್ವಾತಂತ್ರ್ಯ ಪಡೆದ ನಾವು ಈಗ ನಮ್ಮೊಳಗೇ ನಾವು ಪರಕೀಯರಾಗುತ್ತಿದ್ದೇವೆ. ಹಿಂಸೆಯ ತಾಂಡವದಲ್ಲಿ ಹೇಗೊ ಬದುಕುತ್ತಿದ್ದೇವೆ. ಭಾವೈಕ್ಯತೆಯಿಂದ ಸ್ವಾತಂತ್ರ್ಯ ಪಡೆದವರಾದ ನಾವು ಭಾವ ಶೂನ್ಯರಾಗುತ್ತ ಸಾಗಿದ್ದೇವೆ. ಏಕೆ? ನಮ್ಮೊಳಗೆ ಈ ಪರಕೀಯ ಭಾವನೆ ಹುಟ್ಟು ಹಾಕಿದವರು ಯಾರು? ನಮ್ಮನ್ನು ಆಳುವ ಪ್ರಭುಗಳೇ? ಆ ಪ್ರಭುಗಳಿಂದಲೆ ಹುಟ್ಟಡಗಿಸಲಾಗಿಡೆ. ಬೆಳೆಯುತ್ತಲೆ ಇರುವ ವಿಚ್ಛಿದ್ರಕಾರಕ ಶಕ್ತಿಗಳೇ? ಯಾವುದು? ಮನುಷ್ಯ ಮನುಷ್ಯನ ನಡುವೆ ದೊಡ್ಡ ಕಂದರ ತೋಡುತ್ತಿರುವುದು. ತೋಡುತ್ತಲೇ ಇರುವುದು. ಕೌಟುಂಬಿಕ ಆಯಕಟ್ಟಿನಲ್ಲೂ ಲೋಭ ಲಾಲಸೆಗಳು ಹೆಚ್ಚುತ್ತಿರುವುದು ರಕ್ತ ಸಂಬಂಧಗಳು ಹರಿದು ಹೋಗುತ್ತಿರುವುದು. ಆಸ್ತಿ-ಅಂತಸ್ತುಗಳ ಅಂತರ ಪರಸ್ಪರರನ್ನು ಆಂತರಂಗಿಕವಾಗಿ ದೂರಾಗಿಸಿ ಬಿಡುವುದು ಹೆಚ್ಚುತ್ತಲೇ ಇದೆ.

ಇಂದು ಸಾಮಾನ್ಯ ಮನುಷ್ಯ ತನ್ನ ದುಡಿಮೆಯ ಸಂಪೂರ್ಣ ಫಲ ದಕ್ಕಿಸಿಕೊಳ್ಳಲಾರ. ಜೀವನ ಅವನಿಗೆ ನಿತ್ಯಕಷ್ಟವೂ ದುರ್ಭರವೂ ಆಗುತ್ತಿದೆ. ಹಗಲು ಬಹು ಪಾಲು ಬೇಗುದಿಯನ್ನೇ ತರುತ್ತದೆ. ಸಂಜೆ ತಂಪೆರೆಯುತ್ತ ದಣಿವಾರಿಸುವ ಬದಲು ಬರೀ ನಿಟ್ಟುಸಿರೆಳೆಸುತ್ತಿದೆ. ರಾತ್ರಿ ಎಂಬುದು ನಿದ್ರೆಗೆ ಶರಣಾಗುವಂತೆ ಮಾಡದೆ ನೆಮ್ಮದಿ ಕಸಿದುಕೊಂಡು ಕರಾಳವೆನಿಸಿಬಿಡುತ್ತದೆ. ಆದರೆ, ಇವೆಲ್ಲ ಬೇಗೆ, ಕೆಟ್ಟ ಬಗೆ ವಿಭ್ರಮೆಗಳ ನಡುವೆ ಮನುಷ್ಯನ ಬದುಕು ಸಾಗುತ್ತಿದೆ. ಅತ್ಯಾಶ್ಚರ್ಯವೆಂದರೆ ಜನಸಂಖ್ಯೆ ಹೆಚ್ಚುತ್ತಲೆ ಇದೆ! ಜನ ತಮ್ಮ ಭವಿಷ್ಯವನ್ನು ರೂಪಿಸುವುದಕ್ಕೆ ಸ್ವ-ಸಾಮರ್ಥ್ಯದೊಂದಿಗೆ ಮುಂದುವರಿಯುವುದರ ಬದಲು, ಋಜು ಮಾರ್ಗದಿಂದ ಅವಕಾಶಗಳನ್ನು ಹೊಂದುವುದರ ಬದಲು ಇತರರೊಂದಿಗೆ ಮೇಲ್ಪಟ್ಟವರೊಂದಿಗೇ ಜಾಣತನದಿಂದ (ಹಣಕೊಟ್ಟಾದರೂ) ಹೊಂದಾಣಿಕೆ ಮಾಡಿಕೊಳ್ಳುವುದೇ 'ಪರಮಗುರಿ' ಎಂದು ಕೊಂಡಂತಿದೆ. ಅದೇ

ನಿಜವಾದ ಅಸ್ತಿತ್ವದ ಪರಿ? ಹಾಗೇ ಅಡ್ಜೆಸ್ಟ್ ಆಗುವುದರಲ್ಲಿ ರಾಜಿಮಾಡಿಕೊಳ್ಳುವುದರಲ್ಲೇ ಮನುಷ್ಯನ ಸ್ವಂತಿಕೆ, ಅರ್ಹತೆ, ಪ್ರತಿಭೆಗಳೆಲ್ಲ ಮೂಲೆಗುಂಪು, ಹಣವುಳ್ಳವರು ಬಲವುಳ್ಳವರದೇ ಸಿಂಹಪಾಲು! ಕಾರಣ ಸ್ವಾರ್ಥ ತುಂಬಿದ ಕ್ಷುದ್ರ ರಾಜಕೀಯ ರಕ್ಕಸರದೆ ವ್ಯವಸ್ಥೆಯ ಹಿಡಿತ. ಅವರೆದುರಿನ ಪ್ರೇತ ನರ್ತನ ಅವರದೇ ಸೃಷ್ಟಿಯ ಕ್ರಿಯೆ ಪರಿಣಾಮ ಯುವ ಪೀಳಿಗೆಗೆ ಹತಾಶೆಯೆ. ಏನೇಆಗಲಿ, ಮಾನವೀಯ ಮೌಲ್ಯಗಳು, ಸಂಬಂಧಗಳು ಬೇಕಾಬಿಟ್ಟಿ ಯಾಗುತ್ತಿರುವುದು ಬದುಕು ಮೂರಾಬಟ್ಟೆಯಾಗುತ್ತಿರುವುದು. ಮನುಷ್ಯನ ಎಲ್ಲ ಅಪಗತಿಗಳ ಸಂಕೇತ. ಇಲ್ಲಿ ಧೈರ್ಯವಿದ್ದವನು, ಋಜು ಮಾರ್ಗವಲ್ಲೆ ನಂಬಿಕೆ ಹೊತ್ತವನು, ಸಾವಿಗೂ ಅಂಜದವನ್ನು ಜತೆಗೆ ಅದೃಷ್ಟ ಶಾಲಿಯಾದವನು ದೈತ್ಯರ ನಡುವೆಯೂ ಕಂಡು ಕೊಳ್ಳುತ್ತಾನೆ ತನ್ನದೇ ಸ್ಥಾನ. ತನ್ನ ಸ್ವಂತಿಕೆಗೊಂದು ಆದರ್ಶ.

ಇಂದಿನ ದಿನಗಳಲ್ಲಿ ಅರ್ಧ ಸತ್ಯದಲ್ಲಿ ಬದುಕು ವಿಜೃಂಭಿಸಿದರೆ, ಇನ್ನರ್ಧ ಸುಳ್ಳಿನಲ್ಲಿ ಅದು ವಿಭ್ರಮಿಸಿದೆ. ಕಾರಣ ಘೋರ ಕೃತ್ಯಗಳು ನಡೆದು ಸತ್ಯ ಕಣ್ಣೀರಿಡುವಾಗ, ಪ್ರೇತನರ್ತನ. ಅಥವಾ ಬೂದಿ ಮುಚ್ಚಿದ ಕೆಂಡದಂತೆ ಸತ್ಯ ಸಿಡಿದೆದ್ದು ರಕ್ಕಸರನ್ನು ದಹಿಸಿದಾಗಲೇ ಸುದೈವ. ಅಲ್ಲದೇ ದೈವಗಣಗಳಾದ ಮನುಷ್ಯರಿಗೆ ಸಂತೋಷ. ಹೌದು, ಪ್ರಳಯದ ಮಹಾ ಒಡಲಲ್ಲೇ ಸೃಷ್ಟಿಯ ಕೂಸು. ಇಷ್ಟನ್ನು ಮಾತ್ರ ನಾವು ನೆನೆಯುವುದು ಲೇಸು-ನಮಗೆ ಬದುಕು ಅರ್ಥಹೀನವೆನಿಸುವುದು ಆತ್ಮಘಾತಾಕುತನದಿಂದಲೇ. ಕೊಳಗೇರಿಯ ಶೀಲಗೆಟ್ಟ ಬದುಕೆಷ್ಟು ಹೇಯವೋ ಅಷ್ಟೇ ಉಪ್ಪರಿಗೆಯ ಚರಿತ್ರಹೀನ ಬದುಕೂ.

ಗತಿಶೀಲವಾದ ಬದುಕು ಎಂದಿಗೂ ಪರಸ್ಪರ ಸಂವೇದನೆಗಳಿಂದಕೂಡಿರುತ್ತದೆ. ಸದಾ ತನಗೂ ಇತರರಿಗೂ ಹಿತವನ್ನೇ ಕೋರುತ್ತದೆ. ಇಂದು ನಮ್ಮ ನೆಮ್ಮದಿಯ ಬದುಕಿಗೆ ಬೇಕಿರುವುದು ಜಾತಿ-ಮತಗಳನ್ನು ಧ್ವನಿಸುವ ಧರ್ಮವಲ್ಲ ನಮ್ಮ ಅಂತರಿಕ ಇತಿ ಮಿತಿಗಳನ್ನು ಗುರುತಿಸುವ ಕರ್ಮ. ನಮ್ಮಂತೇ ಇತರರೆಂದು ಓಲೈಸಿ ಆದರಿಸುವ ಮಾನವ ಧರ್ಮ. ಇದು ನಮ್ಮ ನಿತ್ಯದ ಪರಿಗಣನೆಯಾಗಬೇಕು. ಇಲ್ಲವಾದರೆ, ಅರ್ಧಸುಳ್ಳಿನಿಂದಲೇ ಚಲಿಸುತ್ತಿರುವುದೆಲ್ಲವೂ ಪೂರ್ತಿ ಸುಳ್ಳೇ ಆಗಿ ಅದೆಲ್ಲವೂ ಕೆಡುಕಾಗಿ ವಿನಾಶಕ್ಕೆಡೆಗೊಡುವಂತಾಗುವುದು, ಖಂಡಿತವೇ.

ಸಿದ್ಧಗಂಗಾ

# ವಿಜ್ಞಾನಿಗಳ ದೃಷ್ಟಿಯಲ್ಲಿ ದೇವರು-೨

ಎಚ್. ಎಸ್. ನರಸಿಂಹಜೀಯರ್, ಎಸ್.ಎಸ್. ಪುರಂ, ತುಮಕೂರು.

ಪ್ಯಾಸ್ಕಲ್ (Pascal) ಎಂಬ ಪಾಶ್ಚಿಮಾತ್ಯ ವಿದ್ವಾಂಸನು "ವ್ಯಕ್ತಿಯ ಜೀವನದಲ್ಲಿ ದೈವದ ನಂಬಿಕೆಯು ಬಹು ಮುಖ್ಯ." ಎಂದಿದ್ದಾನೆ. ಅವನ ಮಾತು ಹೇಳುವುದಾದರೆ "A man without faith in God is worse than an invalid, because he is without the vital living essence of life." ದೈವದಲ್ಲಿ ನಂಬಿಕೆಯಿಲ್ಲದ ವ್ಯಕ್ತಿಯು ಅಪ್ರಯೋಜಕ ಮನುಷ್ಯನಿಗಿಂತಲೂ ಕೀಳು: ಏಕೆಂದರೆ ಜೀವನಕ್ಕೆ ಅತ್ಯಾವಶ್ಯಕವಾದ ಚೈತನ್ಯವೇ ಅವನಲ್ಲಿಲ್ಲ.' ಪ್ರತಿಯೊಬ್ಬ ವ್ಯಕ್ತಿಯ ಬದುಕೂ ಸಾರ್ಥಕವಾಗಬೇಕಾದರೆ, ಅವನ ಜೀವನ ಉತ್ತಮ ಜೀವನವೆಂದೆನಿಸಿಕೊಳ್ಳಬೇಕಾದರೆ, ಭಗವಂತನ ಇರುವಿಕೆಯಲ್ಲಿ ನಂಬಿಕೆ ಬೇಕೆ ಬೇಕು ಎಂಬುದು ಅವನ ಸ್ಪಷ್ಟ ಅಭಿಪ್ರಾಯ.

ಇಂತಹ ಪ್ರಾಮುಖ್ಯವಾದ, ಮೌಲ್ಯಜೀವನ ನಡೆಸಲು ಕಾರಣವಾಗುವ ಪರಮಾತ್ಮನ ಅಸ್ತಿತ್ವದ ಬಗ್ಗೆ ಶ್ರೇಷ್ಠ ವಿಜ್ಞಾನಿಗಳು ತಮ್ಮ ಸಂಶೋಧನೆಗಳಿಂದ ಹಾಗೂ ಅನುಭವದಿಂದ ಕಂಡುಕೊಂಡ ಕೆಲವು ಅಂಶಗಳ ಬಗ್ಗೆ ಪರಿಶೀಲಿಸೋಣ.

Dr. C.A. Battista of the Central Research Depart ment; F.M.C., Corporation in U. S. A., well-known for his micro crystal research says " Science leads basically to the search towards knowing god in things and phenomena. " ವಿಜ್ಞಾನಿ ಬಾಟಿಸ್ಟರವರ ಪ್ರಕಾರ " ವಿಜ್ಞಾನವು ಮೂಲತಃ ಜಗತ್ತಿನಲ್ಲಿ ವ್ಯಾಪಿಸಿರುವ ವಸ್ತುಗಳಲ್ಲಿ ಹಾಗೂ ಅದರ ಭವ್ಯ ಸ್ವರೂಪದಲ್ಲಿ ಸೃಷ್ಟಿಕರ್ತನನ್ನು ಹುಡುಕುವುದೇ ಆಗಿದೆ." ಎಂದಿದ್ದಾನೆ.

ಅಮೇರಿಕಾದ " Friendship-7' ದ ಆಕಾಶ ನೌಕೆಯಲ್ಲಿ ಗಗನಕ್ಕೇರಿ ಅನೇಕ ಸಾರಿ ಈ ಭೂಮಂಡಲವನ್ನು ಪ್ರದಕ್ಷಿಣೆಮಾಡಿ ಬ್ರಹ್ಮಾಂಡದ ಭವ್ಯತೆಯನ್ನೂ, ರಮ್ಯತೆಯನ್ನೂ ಸ್ವತಃ ವೀಕ್ಷಿಸಿ, ವಿಶ್ವದಲ್ಲಿ ಚಲಿಸುತ್ತಿರುವ ಅಸಂಖ್ಯ ನಕ್ಷತ್ರಗಳ, ಗ್ರಹಗಳ ಹಾಗೂ ನಕ್ಷತ್ರ ಪುಂಜಗಳ, ನೀಹಾರಿಕೆಗಳ ಸಿಖರತೆಯನ್ನು ಅಭ್ಯಸಿಸಿ ಭಾವ ಪುಳಕಿತನಾದ ಖಗೋಳ ಯಾತ್ರಿ Jhon Glen ಎಂಬ ಮಹಾಶಯನು ತನ್ನ ಸ್ವಂತ ಅನುಭವವನ್ನು ಈ ರೀತಿ ವರ್ಣಿಸಿದ್ದಾನೆ.



I experienced God's presence in the Vastness of space of the Universe and the Clock-wise precision with which it moves. Wherever you look at the Universe, there is a plan, exactness and order from the smallest atomic structure to swirling galaxies of stars millions of light years in diameter, all travelling in prescribed orbits in relation to one another. The plan is evident in the Universe is the big thing that proves that there is God with the skill and power to put all this in to orbit and keep it there.'

'ಈ ವಿಶ್ವದ ಅನಂತ ವಿಸ್ತಾರದಲ್ಲಿ ಹಾಗೂ ಅದರ ಕರಾರುವಾಕ್ಕಾದ ಚಲನೆಯಲ್ಲಿ ಪರಮಾತ್ಮನ ಇರುವಿಕೆಯನ್ನು ಅನುಭವಿಸಿದ್ದೇನೆ. ಬ್ರಹ್ಮಾಂಡದ ಯಾವುದೇ ದಿಕ್ಕಿನಲ್ಲಿ ವೀಕ್ಷಿಸಿದರೂ, ಅತಿ ಸೂಕ್ಷ್ಮಾತಿಸೂಕ್ಷ್ಮವಾದ ಪರಮಾಣುವಿನ ರಚನೆಯಿಂದ ಹಿಡಿದು, ಲಕ್ಷಾಂತರ ಜ್ಯೋತಿವರ್ಷಗಳ ( ಬೆಳಕು ಒಂದು ಸೆಕೆಂಡಿಗೆ ಮೂರು ಲಕ್ಷ ಕಿ.ಮೀ. ವೇಗ ಒಂದು ವರ್ಷ ಚಲಿಸುವ ದೂರವೇ ಒಂದು ಜ್ಯೋತಿವರ್ಷ) ವ್ಯಾಸ ದೂರದಷ್ಟು ಹೊಂದಿರುವ ನಕ್ಷತ್ರ ಪುಂಜಗಳವರೆಗೆ, ಎಲ್ಲವುಗಳಲ್ಲಿಯೂ ಒಂದುಯೋಜನೆ ಇದೆ. ಇವೆಲ್ಲಾ ನಿಯಮಿತವಾದ ಪಥದಲ್ಲಿ ಪರಸ್ಪರ ನಿಖರವಾದ ದೂರದಲ್ಲಿಯೇ ಯೋಜನಾ ಬ್ರಹ್ಮಾಂಡದ ರಚನೆಯಲ್ಲಿ ಕಂಡುಬರುವ ಸ್ಪಷ್ಟವಾದ ಈ ಯೋಜನೆಯು, ಭೌತ ಜಗತ್ತಿನ ಸರ್ವವನ್ನೂ ಆಯಾ ಪಥದಲ್ಲಿಟ್ಟು ಊಹಿಸಲಾಗದಷ್ಟು ವೇಗದಿಂದ ಚಲಿಸುವಂತೆ ಮಾಡಿರುವುದು, ಅತ್ಯಂತ ಕುಶಾಗ್ರಮತಿ, ಪ್ರಜ್ಞಾವಂತ ಹಾಗೂ ಸರ್ವಶಕ್ತನಾದ ಭಗವಂತನೊಬ್ಬ ನಿದ್ದಾನೆಂಬುದನ್ನು ಸಮರ್ಥಿಸುತ್ತದೆ ಎಂದಿದ್ದಾನೆ.

Lincoln Barnett, Physicist, Points out, ' Most Scientists, when referring to mysteries, forces, origins rationality and harmony of the Universe, tend to avoid using the word God. Yet Einstein had no such inhibitions. "ಭೌತ ವಿಜ್ಞಾನಿ ಲಿಂಕನ್ ಬಾರ್ನೆಟ್ ಎಂಬುವನು, ದೇವರ ಹೆಸರನ್ನು ವಿಜ್ಞಾನಿಗಳು ಉಪಯೋಗಿಸದೆ ಇರುವ ಬಗ್ಗೆ ಈ ರೀತಿ ಹೇಳಿದ್ದಾನೆ. "ಬಹಳ ಮಂದಿ ವಿಜ್ಞಾನಿಗಳು ಈ ವಿಶ್ವದ ರಚನೆಯಲ್ಲಿ ಕಂಡುಬರುವ ರಹಸ್ಯಗಳನ್ನು, ಆಶ್ಚರ್ಯಕರ ಸಂಗತಿಗಳನ್ನು, ಶಕ್ತಿಗಳನ್ನು, ಮೂಲಗಳನ್ನು, ಬುದ್ಧಿಶಕ್ತಿಯನ್ನು ಹಾಗೂ ಏಕತೆಯನ್ನು ತಮ್ಮ ಸಂಶೋಧನೆಗಳಲ್ಲಿ ಕಂಡರೂ ಸಹ " ದೇವರು " ಎಂಬ

ಪದವನ್ನು ಉಪಯೋಗಿಸಲು ಹಿಂಜರಿಯುತ್ತಾರೆ. ಆದರೆ ಪ್ರಖ್ಯಾತ ವಿಜ್ಞಾನಿ ಐನ್‌ಸ್ಟೀನ್ ಮಾತ್ರ ಯಾವ ಮುಜುಗರವೂ ಇಲ್ಲದೆ ದೇವರ ಹೆಸರನ್ನು ಉಪಯೋಗಿಸಿ ಅವನ ದೃಷ್ಟಿಯಲ್ಲಿ ದೇವರು ಎಂದರೆ ಏನು ಎಂಬುದನ್ನು ಈರೀತಿ ಹೇಳಿದ್ದಾನೆ" ಎಂದು ತಿಳಿಸಿದ್ದಾನೆ.

'My religion Consists of a humble admiration of the illimitable superior sprit who reveals himself if the slight details we are able to perceive with our frail and feeble minds. That deeply emotional Conviction of the presence of a superior reasoning power, which is revealed in the in Comprehensible Universe forms my idea of God'' - instein ಪ್ರಖ್ಯಾತ ವಿಜ್ಞಾನಿ ಐನ್‌ಸ್ಟೀನನು ಹೇಳಿರುವ ದೇವರ ಬಗೆಗಿನ ಈ ಅಭಿಪ್ರಾಯ ನಮ್ಮ ವೇದಾಂತ ಶಾಸ್ತ್ರಗಳಿಗನುಗುಣ ವಾಗಿದೆಯಲ್ಲವೇ ?





"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ
ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ
ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ
ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ
ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ
ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

# ಆಶೆಯಿಲ್ಲದ ತ್ಯಾಗ ಬೇಕು

-ಪ॥ ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಚ್ಚಿನ-574295 (ದ.ಕ)

ಒಬ್ಬ ದೊರೆ ತಪಸ್ಸಿಗಾಗಿ ತನ್ನ ರಾಣಿಯೊಂದಿಗೆ ಕಾಡಿಗೆ ಹೋದ. ಸುದೀರ್ಘ ಕಾಲ ತಪಸ್ಸು ಮಾಡಿ ದೇವರನ್ನು ಒಲಿಸಿಕೊಂಡು, ತನಗೆ ದೀರ್ಘಾಯುಷ್ಯದ ವರವನ್ನು ಹೇಳಿ ಪಡೆದುಕೊಂಡ. ಬಳಿಕ ರಾಣಿಯೊಂದಿಗೆ, ಬಾ ಪ್ರಿಯೆ, ನಾನು ದೀರ್ಘಾಯುಷಿಯಾಗಿದ್ದೇನೆ. ನಾವು ನಮ್ಮ ರಾಜ್ಯಕ್ಕೆ ತೆರಳಿ ಚಿರಕಾಲ ಪಟ್ಟವನ್ನಾಳೋಣ ಎಂದು ಕರೆದ,

ನಾನು ನಿಮ್ಮೊಂದಿಗೆ ಬರುವುದಿಲ್ಲ ಎಂದಳು ರಾಣಿ. ದೊರೆಗೆ ಅಚ್ಚರಿ. ಯಾಕೆ ನಿನಗೇನು ತಲೆ ತಿರುಗಿತು. ? ಎಂದು ಕೇಳಿದ. ನೀವು ನಿಮಗಾಗಿ ದೀರ್ಘಾಯುಷ್ಯವನ್ನು ದೇವರಲ್ಲಿ ಕೇಳಿದಿರಿ. ಆದರೆ ನಿಮ್ಮ ಪ್ರಜೆಗಳಿಗೂ ನಿಮ್ಮಂತೆಯೆ ಸುಖ, ಆರೋಗ್ಯಗಳಿರುವ ಚಿರಕಾಲದ ಜೀವಿತವನ್ನು ಕೇಳಿದಿರಾ? ಪ್ರೀತಿಸುವ ಪ್ರಜೆಗಳಿಲ್ಲದ ಮೇಲೆ ಒಂಟಿಯಾಗಿ ನೀವು ಆಳಿಯುವ ಸುಖವನ್ನು ಹೊಂದುತ್ತೀರಿ ? ಎಂದು ರಾಣಿ ತಿರುಗಿ ಕೇಳಿದಳು. ದೊರೆಗೆ ತನ್ನ ತಪ್ಪಿನ ಅರಿವಾಯಿತು. ಅದನ್ನು ತಿದ್ದಿಕೊಂಡ.

''ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇ ನೈಕೇ ಅಮೃತತ್ವ ಮಾನುಷುಃ" ಜೀವನದಲ್ಲಿ ತ್ಯಾಗ ಮತ್ತು ಶೀಲಗಳು ಮನುಷ್ಯನನ್ನು ಅಮೃತತ್ವಕ್ಕೊಯ್ಯುವ ಎರಡು ನಯನಗಳು. ಉದಾತ್ತ ಜೀವನವು ನಮ್ಮ ಬದುಕನ್ನು ರೂಪಿಸುತ್ತದೆ. ಎಲ್ಲರಿಗಾಗಿ ಎಲ್ಲರೂ ಶ್ರಮಿಸಿದಾಗ ಲೋಕೋದ್ಧಾರವಾಗುತ್ತದೆ. ಸ್ವಾರ್ಥ ತ್ಯಾಗದಿಂದ ಪರರ ಹಿತವನ್ನು ಬಯಸುವವನೂ ಮಾನವೀಯ ಗುಣಗಳನ್ನು ಒಲಿಸಿಕೊಳ್ಳಬಲ್ಲವನು. ಈ ಜಗತ್ತನ್ನು ಸೃಷ್ಟಿಸಿದ ದೇವನು ಸೂರ್ಯ, ಚಂದ್ರ, ಮಳೆ, ಮರ ಮೊದಲಾದ ಭೋಗವಸ್ತುಗಳನ್ನು ಒಬ್ಬನ ಹಿತಕ್ಕೆಂದು ಮೀಸಲಿಡದೆ ಎಲ್ಲರಿಗೆಂದೇ ಸೃಷ್ಟಿಸಿದ. ಆದರೆ ಅದೆಲ್ಲವೂ ತನ್ನೊಬ್ಬನದೇ ಎಂದು ಹೋರಾಡುವ ಭೋಗಿಯು ತ್ಯಾಗದಿಂದ ಸಿಗುವಯೋಗಾನಂದವನ್ನು ಅನುಭವಿಸಲಾರ ತ್ಯಾಗದಿಂದ ದೂರವುಳಿದವ ಮೋಕ್ಷವನ್ನು ಹೊಂದಲಾರ.

ಎಲ್ಲಿ ಸ್ವಾರ್ಥವಿದೆ ಅಲ್ಲಿ ತ್ಯಾಗವಿಲ್ಲ. ಮಗುವನ್ನು ದೇವರಿಗೆ ಹೋಲಿಸುತ್ತಾರೆ. ಅದು ಆ ಮಗುವಿನ ಮನಸ್ಸು ನಿರ್ಮಲವಾಗಿರುವುದಕ್ಕಾಗಿ. ತಾನು ತನ್ನದು ಎಂಬ ದುರ್ಭಾವನೆ ಆ ಮನಸ್ಸಿನಲ್ಲಿಲ್ಲ. ಅದು ಆವರಿಸಿದಂತೆ ಅಲ್ಲಿ ನೆಲೆಸಿದ್ದ ದಿವ್ಯತ್ವವು ಮಾಯವಾಗುವುದು. ನೀರಿನಲ್ಲಿ ಕಾಣುವ ಆಕಾಶದ ಪ್ರತಿ ಬಿಂಬವು ಸ್ಥಿರವಾಗಿದ್ದರೂ ನೀರನ್ನು ಅಲ್ಲಾಡಿಸಿದಾಗ ಅದೂ ಅಲುಗಾಡಿದಂತೆ ಕಾಣುವುದಲ್ಲವೆ?



ಸ್ಥಿರವಾದ ಮನಸ್ಸು ಚಂಚಲಗೊಂಡು ಅಲ್ಲಾಡಿದರೆ ದೈವಸ್ವರೂಪಿಯಾದ ಆತ್ಮವು ಕೂಡ ಅಲುಗಾಡತೊಡಗಿ ಮನುಷ್ಯ ಅಜ್ಞಾನದ ಸೇತುವಾಗುವುದನ್ನು ತಡೆಯಲಾರದು.

ತ್ಯಾಗವಿಲ್ಲದೆ ಬದುಕಾದರೂ ಎಲ್ಲಿ ? ನಾನು ನನಗಾಗಿಯೇ ಬದುಕುತ್ತಿದ್ದೇನೆ ಎಂದು ಭಾವಿಸುವ ಮನುಷ್ಯ ಅನಂತರ ಹೆಂಡತಿಯನ್ನು ಅವಳಿಂದ ಜನಿಸಿದ ಮಕ್ಕಳನ್ನು ಕೂಡ ತನ್ನ ಬಳಗದಲ್ಲಿ ಸೇರಿಸಿಕೊಂಡು ಅವರಿಗಾಗಿಯೂ ತಾನು ಬದುಕುತ್ತಿದ್ದೇನೆಂದು ತಿಳಿಯುತ್ತಾನೆ. ಹೀಗಿರುವಾಗ ಇಡೀ ಗ್ರಾಮಕ್ಕೆ ಪೂರಕವಾದ ಒಂದುರೋಗ ವ್ಯಾಪಿಸುತ್ತಿದೆಯೆನ್ನುವಾಗ ಆತ ಎರಡೂ ಕೈಯೆತ್ತಿ ದೇವರೇ ಇದೊಂದು ಗ್ರಾಮಕ್ಕೆ ಆ ವ್ಯಾಧಿ ಬರದಂತೆ ರಕ್ಷಿಸಿ ಎಂದು ಮೊರೆಯಿಡುತ್ತಾನೆ. ಅಲ್ಲಿರುವ ಉದ್ದೇಶ ತನ್ನ ಕುಟುಂಬ ಸುರಕ್ಷಿತವಾಗಿರಬೇಕೆಂಬುದೇ ಆದರೂ ತನ್ನೊಬ್ಬನನ್ನೇ ದೇವರು ಉಳಿಸಲು ಮಾಡಲಾರ ಎಂಬ ಶಂಕೆಯಿಂದ ಹೀಗೆ ಕೇಳುತ್ತಾನೆ.

ಹೀಗೆ ವ್ಯಾಧಿಯಿಂದ ಊರನ್ನುಳಿಸಲು ತನ್ನ ಕುಟುಂಬದ ಸಲುವಾಗಿ ಬೇಡುವ ಮನುಷ್ಯ ಎಲ್ಲರಿಗೂ ಆರೋಗ್ಯಸಿಗಲಿ, ಭಾಗ್ಯಸಿಗಲಿ, ಒಳ್ಳೆ ಬೆಳೆಯೂ ಬರಲಿ ಎಂದು ಹಾರೈಸುವುದಿಲ್ಲವೇಕೆ ? ಈಗೇಕೆ ಅವನ ಹೃದಯ ಕಿರಿದಾಗಿದೆ?

ನಮ್ಮ ಬದುಕು ಇನ್ನೊಬ್ಬರ ತ್ಯಾಗದಿಂದ ರೂಪಿತವಾಗಿದೆ. ತಾಯಿಯಿಂದ ಈ ದೇಹ ಲಭಿಸಿದೆ. ತಂದೆಯಿಂದ ಬುದ್ಧಿ ಲಭಿಸಿದೆ. ನಮಗೆ ಹಾಲು ಕೊಡುವ ಹಸು ತನ್ನ ಕರುವಿನ ಆಹಾರವನ್ನು ಮೌನವಾಗಿನಿಂತು ನಮಗಾಗಿ ಸ್ರವಿಸಿದೆ. ಕಲ್ಪವೃಕ್ಷದ ಫಲದೊಳಗೆ ಅದು ತುಂಬಿಕೊಂಡ ನೀರು ಅದರ ಸಂತಾನಾಭಿವೃದ್ಧಿಯ ಜೀವಜಲ. ಹೀಗೆ ಪ್ರಕೃತಿಯಿಂದ ನಾನಾ ವಿಧದ ಪ್ರಯೋಜನಗಳನ್ನು ಹೊಂದುವ ನಾವು ನಮ್ಮ ಬುದ್ಧಿ, ಮನಸ್ಸು, ಚಿತ್ತ, ಅಂತಃಕರಣಗಳಲ್ಲಿಯೂ ಇನ್ನೊಬ್ಬರಿಗೆ ಹಿತಬಯಸುವ ತ್ಯಾಗವನ್ನು ಮಾಡುವುದಿಲ್ಲವಲ್ಲ.?

ಈಗಿನ ವಿದ್ಯಾರ್ಜನೆಯ ಉದ್ದೇಶವೂ ಪರಹಿತದ ಸಾಧನೆಯತ್ತ ಮಕ್ಕಳನ್ನೊಯ್ಯುವುದಿಲ್ಲ. ಒಳ್ಳೆಯ ಉದ್ಯೋಗ ಪಡೆದು ಹೆಂಡತಿ, ಮಕ್ಕಳೊಡನೆ ಸಂಸಾರದಲ್ಲಿ ಸುಖವನ್ನುಣ್ಣುವ ಕನಸನ್ನು ಆತ ಕಾಣುವನಲ್ಲದೆ ಮುಂದಿನವರಿಗಾಗಿ ತಾನು ಸಮಾಜಕ್ಕೆ ಒಂದು ಒಳ್ಳೆಯ ಕೊಡುಗೆಯನ್ನು ನೀಡಬೇಕೆಂದು ಬಯಸುವುದಿಲ್ಲ. ವಿದ್ಯಾವಂತನಾದವನು ಸಮಾಜ ಸೇವೆಯಲ್ಲಿ ತನ್ನನ್ನು ತೊಡಗಿಸುವುದು ಸ್ವಾರ್ಥತ್ಯಾಗದ ಒಂದು ಮುಖ. ಜೀವನವಿಡೀ ಇನ್ನೊಬ್ಬರನ್ನು. ತಾನು ನೋಯಿಸುವುದಿಲ್ಲ, ಉಪಕಾರಗೈದವರಿಗೆ ದ್ರೋಹ ಮಾಡುವುದಿಲ್ಲ ಎಂಬುದು ಒಂದು ವ್ರತವಾದರೆ ಈ ವ್ರತ ದೇವರನ್ನು ಮೆಚ್ಚಿಸಬಲ್ಲುದು.

ಭಗವಂತನಾದ ಬುದ್ಧನು ಒಂದು ಸಲ ನೆರೆದ ಜನರೊಂದಿಗೆ "ನಿಮಗೇನು ಬೇಕು ಕೇಳಿಕೊಳ್ಳಿ. ನಿಮ್ಮ ಆಶೆಯನ್ನು ಈಡೇರಿಸುತ್ತೇನೆ" ಎಂದು ಹೇಳಿದ. ಒಬ್ಬನು ಹಣವನ್ನು ಕೇಳಿದ. ಇನ್ನೊಬ್ಬ ಆಕಳನ್ನು ಮತ್ತೊಬ್ಬ ದೊಡ್ಡ ಜಮೀನನ್ನು ಕೋರಿದ. ಕಡೆಗೆ ಒಬ್ಬ ಬಡಮನುಷ್ಯ ಉಳಿದ. ಆತ ಭಗವಂತನಲ್ಲಿ ಏನೂ ಕೋರದಿದ್ದರೂ ಮಂದಹಾಸದಿಂದ ಬುದ್ಧ "ನಿನಗೆ?" ಎಂದು ಕೇಳಿದ.

ಅವನು ನಾನು ಮೈಮುರಿದು ದುಡಿದು ಹೊಟ್ಟೆತುಂಬ ಉಣ್ಣುತ್ತಿದ್ದೇನೆ. ರಾತ್ರಿ ಚೆನ್ನಾಗಿ ನಿದ್ರೆಬರುವುದರಿಂದ ಆರೋಗ್ಯವೂ ಇದೆ. ನನಗೇನಾದರೂ ಕೊಡಲೇಬೇಕೆಂಬ ಆಶಯು ನಿನಗಿದ್ದರೆ ನನಗೆ ಯಾವುದರಲ್ಲೂ ಆಶೆ ಉಂಟಾಗದಿರಲಿ ಎಂಬ ವರವನ್ನು ಕೊಡು. ಆಶೆ ದುಃಖಕ್ಕೆ ಮೂಲ." ಎಂದ ಆತ.

ಆಶೆಯೊಂದನ್ನು ತ್ಯಾಗ ಮಾಡಿದರೆ ಈ ಜಗತ್ತು ನಮ್ಮದೇ ಕುಟುಂಬವೆನ್ನುವಷ್ಟು ಸನಿಹವಾಗುತ್ತದೆ.





# ವಿಶ್ವಶಾಂತಿ ದೂತ ಐನ್‌ಸ್ಟೈನ್


ಮುನಿಯಾಲ್ ಗಣೇಶ್ ಶೆಣೈ, 14, ಕಾರ್ಕಳ ಹೌಸ್, ಸಾರಕ್ಕಿ, ಜೆ.ಪಿ. ನಗರ, ಬೆಂಗಳೂರು-78


"ನಾವು ಪ್ರತಿಯೊಬ್ಬರೂ ಇಲ್ಲಿ ಕ್ಷಣಿಕ ಪ್ರವಾಸಿಗಳು. ಉದ್ದೇಶವಂತೂ ಯಾರಿಗೂ ತಿಳಿಯದು. ಆದರೆ ಪ್ರತಿಯೊಬ್ಬನೂ ಇತರರಿಗೋಸ್ಕರ ಜೀವಿಸುತ್ತಿರುವುದು ನಿಜ. ನನ್ನ ಅಂತರಿಕ ಮತ್ತು ಬಾಹ್ಯ ಬದುಕಿಗೆ ಮೂಲಶಕ್ತಿ ಒದಗಿಸಿದ ಹಲವರ ಕುರಿತು ನಾನು ಪ್ರತಿದಿನ ಯೋಚಿಸುತ್ತೇನೆ.......... ಸರಳವಾದ ಬದುಕು ಪ್ರತಿಯೊಬ್ಬರಿಗೂ ದೈಹಿಕವಾಗಿ, ಮಾನಸಿಕವಾಗಿ ಉತ್ತಮ ಎಂದು ನಾನು ನಂಬಿದ್ದೇನೆ"

ಈ ಮಾತುಗಳನ್ನು ಹೇಳಿದ ಐನ್‌ಸ್ಟೈನ್ ಇದೇ ರೀತಿ ಬದುಕಿದವರು.

ಆಲ್ಬರ್ಟ್ ಐನ್‌ಸ್ಟೈನ್ ಹುಟ್ಟಿದ್ದು ದಕ್ಷಿಣ ಜರ್ಮನಿಯಲ್ಲಿ. ಅವರ ತಂದೆ ವಿದ್ಯುತ್ ಉಪಕರಣಗಳ ಚಿಕ್ಕ ವ್ಯಾಪಾರಿ. ವ್ಯಾಪಾರದಿಂದ ಹೆಚ್ಚಿನ ವರಮಾನವೇನೂ ಇರಲಿಲ್ಲ. ಸದಾ ಬಡತನ. ಇಂತಹ ಬಡತನದಲ್ಲಿ ಬೆಳೆದ ಬಾಲಕ ಐನ್‌ಸ್ಟೈನ್ ಯಾವುದೇ ಬುದ್ಧಿಮತ್ತತೆ ತೋರಿಸಲಿಲ್ಲ. ಕೆಲವು ಪರೀಕ್ಷೆಗಳಲ್ಲಿ ಉತ್ತೀರ್ಣನೂ ಆಗಲಿಲ್ಲ. ಅವನು ಓದುತ್ತಿದ್ದ ಶಾಲೆಯಲ್ಲಿ ಆಗ ಕಲಿಸುವ ಪದ್ಧತಿ ಯಾವ ವಿದ್ಯಾರ್ಥಿಗೂ ಇಷ್ಟವಾಗುವಂತಿರಲಿಲ್ಲ.

ತಮ್ಮ ಐದನೆಯ ಹುಟ್ಟುಹಬ್ಬಕ್ಕೆ ಉಡುಗೊರೆಯಾಗಿ ಬಂದ ದಿಕ್ಸೂಚಿ ಐನ್‌ಸ್ಟೈನ್‌ರಿಗೆ ಹೊಸಲೋಕವನ್ನು ತೋರಿಸಿತು. ನಂತರ ಶಾಲೆ ಕಾಲೇಜು ದಿನಗಳಲ್ಲಿ ಪ್ರಸಿದ್ಧ ಭೌತವಿಜ್ಞಾನಿಗಳಾದ ಹಲ್ಮ್‌ಹೊಟ್ಸ್, ಹಟ್ಸ್, ಬೊಲ್ಟ್ಸ್‌ಮನ್ ಮುಂತಾದವರ ಕೃತಿಗಳಿಂದ ಐನ್‌ಸ್ಟೈನ್ ಬಹುವಾಗಿ ಆಕರ್ಷಿತರಾದರು.

ಪದವೀಧರರಾದ ಐನ್‌ಸ್ಟೈನ್ ಬರ್ನ್ ನಗರದ ಒಂದು ಸಂಸ್ಥೆಯಲ್ಲಿ ಸ್ವಾಮ್ಯಗಳ ಪರೀಕ್ಷಕ ( ಪೇಟೆಂಟ್ ಎಗ್ಸಾಮಿನರ್ ) ಆಗಿ ಕೆಲಸಕ್ಕೆ ಸೇರಿದರು. ಸಂಬಳ ಕಡಿಮೆ ಇದ್ದರೂ, ಕೆಲಸದ ಒತ್ತಡ ಹೆಚ್ಚು ಇರಲಿಲ್ಲ. ಇದರಿಂದಾಗಿ ಐನ್‌ಸ್ಟೈನ್ ಕುಳಿತಲ್ಲೇ ಭೌತವಿಜ್ಞಾನದ ಕೆಲವು ಮೂಲ ಸಮಸ್ಯೆಗಳ ಕುರಿತು ಚಿಂತಿಸತೊಡಗಿದರು. ಇಂತಹ 'ಚಿಂತನ ಪ್ರಯೋಗ' ಗಳಿಂದಲೇ ಐನ್‌ಸ್ಟೈನ್‌ರ ಸಿದ್ಧಾಂತಗಳು ರೂಪುಗೊಂಡವು. ಯಾವುದೇ ಉಪಕರಣಗಳಿಲ್ಲದೆ, ಪ್ರಯೋಗಗಳಿಲ್ಲದೆ ಐನ್‌ಸ್ಟೈನ್ ಸ್ಪೆಶಲ್ ರಿಲೆಟಿವಿಟಿ ಸಿದ್ಧಾಂತ, ದ್ರವ್ಯಶಕ್ತಿಸಮತತ್ವ, ಅಸ್ತಿತ್ವದ ಅಣುಶಕ್ತಿಯ ಪರಾಮರ್ಶೆ ಮತ್ತು ಫೋಟೋ ಎಲೆಕ್ಟ್ರಿಕ್ ಪರಿಣಾಮ ಕುರಿತ ತಮ್ಮ ಸಿದ್ಧಾಂತಗಳನ್ನು ಪ್ರತಿಪಾದಿಸಿದರು. ಈ ನಾಲ್ಕೂ ಸಂಶೋಧನ ಪತ್ರಗಳು 1905 ರಲ್ಲಿ ಪ್ರಕಟವಾದವು. ಐಸಾಕ್ ನ್ಯೂಟನರನ್ನು ಬಿಟ್ಟರೆ — ಹೀಗೆ ಒಂದೇ ವರ್ಷದಲ್ಲಿ ನಾಲ್ಕು ಸಂಶೋದನೆಗಳನ್ನು ಜಗತ್ತಿಗೆ ನೀಡಿದ ಏಕೈಕ ವ್ಯಕ್ತಿ ಐನ್‌ಸ್ಟೈನ್

ಈ ಸಿದ್ಧಾಂತಗಳಿಂದಾಗಿ ವಿಶ್ವದ ಸ್ವರೂಪವನ್ನು ಕುರಿತಂತೆ ಮಾನವನ ಅಭಿಪ್ರಾಯಗಳ ಮೇಲೆ ಗಾಢವಾದ ಪರಿಣಾಮವಾಯಿತು. ನ್ಯೂಟನ್ನನ ಸಿದ್ಧಾಂತಗಳಿಂದ ಕೈಗಾರಿಕ ಕ್ರಾಂತಿ ಆರಂಭವಾಗಲು ಅನುಕೂಲವಾಯಿತು. ಐನ್‌ಸ್ಟೈನ್ ಸಿದ್ಧಾಂತ ಪರಮಾಣು ಸಂಶೋಧನಾಕ್ಷೇತ್ರ ಮತ್ತು ಬಾಹ್ಯಾಕಾಶ ವಿಜ್ಞಾನ ಬೆಳೆಯಿತು.

ಆಗ ಜರ್ಮನಿಯಲ್ಲಿ ರಾಷ್ಟ್ರೀಯತೆ ಬೇರುಬಿಡುತ್ತಿದ್ದ ಕಾಲ. ಈ ರಾಷ್ಟ್ರೀಯ ಪ್ರಜ್ಞೆಯನ್ನು ಐನ್‌ಸ್ಟೈನ್. ಮೆದುಳಿನ ಸಾಂಕ್ರಾಮಿಕ ಸೋಂಕು" ಎಂದು ಟೀಕಿಸಿದರು. ಮೊದಲ ವಿಶ್ವ ಯುದ್ಧದ ಅಂತ್ಯವಾದಾಗ ಈಗಲಾದರೂ ಜರ್ಮನಿಗೆ ಬುದ್ಧಿ ಬಂದೀತೆಂದು ಐನ್‌ಸ್ಟೈನ್ ಭಾವಿಸಿದರು. ಆದರೆ ಹಾಗಾಗದೆ ನಾಜಿವಾದ ಬೇರು ಬಿಡ ತೊಡಗಿತು. ರಾಷ್ಟ್ರೀಯತೆಯ ಸಂಕುಚಿತ ಬುದ್ಧಿ ತೊರೆದು ವಿಶ್ವ ಮೈತ್ರಿಗಾಗಿ ಶ್ರಮಿಸ ಬೇಕೆಂಬ ಐನ್‌ಸ್ಟೈನರ ಕರೆ ನಾಜಿಗಳಿಗೆ ಕಹಿಯಾಯಿತು. ಐನ್‌ಸ್ಟೈನರಿಗೆ ಕಿರುಕುಳ ಆರಂಭವಾಯಿತು. ಇದು ದಿನೇದಿನೇ ಹೆಚ್ಚಿತು. 1921ರಲ್ಲಿ ಐನ್‌ಸ್ಟೈನರಿಗೆ ನೊಬೆಲ್ ಪ್ರಶಸ್ತಿ ಲಭ್ಯವಾಯಿತು. ಆದರೆ ಜರ್ಮನಿಯಲ್ಲಿ ಅವರಿಗೆ ಅಂತಹ ಗೌರವವನ್ನು ನಾಜಿಗಳು ತೋರಿಸಲಿಲ್ಲ. ಐನ್‌ಸ್ಟೈನ್ 1932ರಲ್ಲಿ ಪ್ರಿನ್ಸ್‌ಟನ್‌ನ ಉನ್ನತ ಶಿಕ್ಷಣ ಸಂಸ್ಥೆಯಲ್ಲಿ ಉದ್ಯೋಗಕ್ಕೆ ಸೇರಿದರು.

ಮನುಷ್ಯನಲ್ಲಿರುವ ಕ್ರೌರ್ಯದ ಬಗ್ಗೆ ಐನ್‌ಸ್ಟೈನರಿಗೆ ಬಹಳ ನಿರಾಶೆಯಾಯಿತು. ಫ್ರಾಯ್ಡ್ ಜತೆಗೆ ನಡೆಸಿದ ಪತ್ರವಿನಿಮಯಗಳಲ್ಲೂ ಮಾನವನ ಈ ದುರ್ಗುಣದ ಸ್ವರೂಪದ ಬಗ್ಗೆ ಚಿಂತನೆ ಇತ್ತು. ಮಿಲಿಟರಿ ಬೆಳವಣಿಗೆಯನ್ನು ತಡೆಗಟ್ಟಲು ಯಾರೂ ಸೈನ್ಯವನ್ನು ಸೇರಬಾರದೆಂದೇ ಅವರು ಅಭಿಪ್ರಾಯ ಪಟ್ಟಿದ್ದರು.

ವಿಶ್ವಶಾಂತಿಯ ಬಯಕೆಯನ್ನೇ ಸದಾ ಹೊಂದಿದ್ದ ಐನ್‌ಸ್ಟೈನ್-ದ್ವಿತೀಯ ಮಹಾಯುದ್ಧದ ಅಪಾರ ಹಾನಿಯನ್ನು ಕಂಡು ಮರುಗಿದರು. ಅವರದೇ ಜ್ಞಾನದ ಆಧಾರದಿಂದ ತಯಾರಾದ ಪರಮಾಣುಬಾಂಬು ಮಾನವಕುಲಕ್ಕೆ ಮಾರಕವಾದುದನ್ನು ಅವರು ಕಂಡರು. ಬದುಕಿನ ಕೊನೆಯವರೆಗೂ ಅವರು ನಿಶ್ಶಸ್ತ್ರೀ ಕರಣಕ್ಕಾಗಿ ಶ್ರಮಿಸಿದರು. " ವಿಶ್ವಶಾಂತಿಯನ್ನು ಸಾಧಿಸಲು ಗಾಂಧಿಮಾರ್ಗವೊಂದೇ ಸಾಧನ" ಎಂದು ಅವರು ಹೇಳಿದರು.

1952ರಲ್ಲಿ ಇಸ್ರೇಲಿನ ಅಧ್ಯಕ್ಷರಾಗುವಂತೆ ಐನ್‌ಸ್ಟೈನರನ್ನು ಆಹ್ವಾನಿಸಲಾಯಿತು. ಅವರು ಇದನ್ನು ನಿರಾಕರಿಸಿದರು. ವಿಶ್ವದ ಪ್ರಮುಖ ವಿಜ್ಞಾನಿಗಳು ಪರಮಾಣು ಯುದ್ಧದಿಂದದಾಗುವ ಅನಾಹುತಗಳ ವರದಿಯೊಂದನ್ನು ಸಿದ್ಧಪಡಿಸಿದ್ದರು. ಇದಕ್ಕೆ ಐನ್‌ಸ್ಟೈನ್ ತಮ್ಮ ಸಹಿ ಹಾಕಿದರು. ಇದಾದ ಎರಡು ದಿನಗಳಲ್ಲಿ, 1955ರ ಏಪ್ರಿಲ್ 13ರಂದು ಅವರು ನಿಧನರಾದರು.

ಬಾಲ್ಯದಿಂದಲೂ ತಮ್ಮೊಳಗೇ ಏಕಾಂತವನ್ನು ಅನುಭವಿಸಿದ ಈಮಹಾನ್ ವ್ಯಕ್ತಿ ಸಾಯುವಾಗಲೂ ನಿಶ್ಚಿಂತರಾಗಿರಲಿಲ್ಲ, ಇದು ಮಾನವಜನಾಂಗದ ದುರಂತವಲ್ಲವೆ?

ಸಿದ್ಧಗಂಗಾ



# ಪರಿಸ್ಥಿತಿ ಮತ್ತು ಪರಿಸರ ವಿಜ್ಞಾನ

–ಡಾ|| ಎಸ್. ಕೆ. ಕಡೇತೋಟದ, ಮಾನವ ಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-3.

**ಪ್ರಸ್ತಾವನೆ :**

ಇತ್ತೀಚೆಗೆ ಪರಿಸ್ಥಿತಿ ಮತ್ತು ಪರಿಸರಗಳನ್ನು ಅಭ್ಯಾಸ ಮಾಡುವದು ಪ್ರಕೃತಿ ಶಾಸ್ತ್ರಜ್ಞರ ಮತ್ತು ಮಾನವಶಾಸ್ತ್ರಜ್ಞರ ಮುಖ್ಯ ಗುರಿಯಾಗಿದೆ. ಪರಿಸ್ಥಿತಿ ಮತ್ತು ಪರಿಸರಗಳ ಮೇಲೆ ಇತರ ಜೀವಿಗಳು ಮತ್ತು ಮಾನವರು ಬಹುಮಟ್ಟಿಗೆ ಪ್ರಭಾವ ಗೊಂಡಿರುವದು ಕಂಡು ಬರುತ್ತದೆ. ಪರಿಸ್ಥಿತಿಯ ವ್ಯಾಖ್ಯೆಯನ್ನು ಸಾಮಾನ್ಯವಾಗಿ ಕೆಳಗಿನಂತೆ ಮಾಡಲಾಗುವದು. "ಪರಿಸ್ಥಿತಿ ಎಂದರೆ ಜೀವಿಗಳು ಬೆಳೆಯಲಿಕ್ಕೆ ಮತ್ತು ಜೀವಿಸಲಿಕ್ಕೆ ಯಾವ ಅಂಶಗಳು ಕಾರಣಗಳಾಗುವವೋ ಅವೆಲ್ಲವುಗಳಿಗೆ ಪರಿಸ್ಥಿತಿ ಎಂದು ಕರೆಯುತ್ತಾರೆ" ಪರಿಸರವೆಂದರೆ "ಯಾವುದೇ ಒಂದು ಜೀವಿಯು ತನ್ನ ಸುತ್ತ ಮುತ್ತಲಿನ ಪರಿಸ್ಥಿತಿಗಳಿಂದ ಪ್ರಭಾವಿತವಾಗಿ ಬೇರೆ ಜೀವಿಗಳೊಂದಿಗೆ ಅಥವ ಇನ್ನಿತರ ಪ್ರಾಕೃತಿಕ ಪ್ರಸಂಗಗಳಿಗೆ ಒಳಗಾಗುವ ಪ್ರಕ್ರಿಯೆಗೆ ಪರಿಸರವೆಂದು ಕರೆಯುತ್ತಾರೆ" ಇಂಥ ಪರಿಸ್ಥಿತಿಕ ಮತ್ತು ಪಾರಿಸರಕ ಪ್ರಕ್ರಿಯೆಗಳಿಂದಾಗಿ ಜೀವಿಗಳ ಮೇಲೆ ಮತ್ತು ಮಾನವರ ಮೇಲೆ ವಿವಿಧ ರೀತಿಯ ಪರಿಣಾಮಗಳಾಗುತ್ತವೆ.

ಮಾನವನು ಸಾಮಾನ್ಯವಾಗಿ ತನ್ನ ಸುತ್ತಮುತ್ತಲಿನ ಪ್ರಕೃತಿಯೊಂದಿಗೆ ದಿನನಿತ್ಯ ಪ್ರಭಾವಕ್ಕೆ ಒಳಗಾಗುತ್ತಾನೆ. ಆದ್ದರಿಂದ ವಿಭಿನ್ನ ಪ್ರಾಕೃತಿಕ ಅಂಶಗಳಿಂದ ಮಾನವರು ವಿಭಿನ್ನ ಪರಿಸ್ಥಿತಿಯಲ್ಲಿ ಬೆಳೆದು ಬರುತಾರ್ತೆ. ಮತ್ತು ಅವರು ವಿಭಿನ್ನತೆಯನ್ನು ಹೊಂದುತ್ತಾರೆ. ಕೊಂಕಣ ಪ್ರದೇಶದಲ್ಲಿಯ ಜನರ ಊಟ, ಉಡಿಗೆ ತೊಡಿಗೆಗಳ ಪ್ರಭಾವ ಮಾವನರ ಸಂಸ್ಕೃತಿಯ ಮೇಲೆ ಆಗುತ್ತದೆ. ಈ ಮೂಲಭೂತ ಪರಿಸ್ಥಿತಿಯನ್ನು ಕೊಂಕಣದ ಜನರು ವಿರೋಧಿಸದೆ ಅಯಾ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುತ್ತಾರೆ. ತಮ್ಮ ಬುದ್ಧಿಶಕ್ತಿಯಿಂದ ಪ್ರಕೃತಿಯನ್ನು ತಮಗೆ ಅನುಕೂಲವಾಗುವಂತೆ ಮಾರ್ಪಡಿಸಿಕೊಳ್ಳುತ್ತಾರೆ. ಆದ್ದರಿಂದ ಮಾನವರು ಸ್ವಾಭಾವಿಕತೆಯಿದ ದೂರವಾಗಿ ಕೃತ್ರಿಮತೆಗೆ ಇಳಿಯುತ್ತಾರೆ. ಆದ್ದರಿಂದ ಸಂಸ್ಕೃತಿ ಮತ್ತು ನಾಗರಿಕತೆಗಳು ಬೆಳೆದಂತೆ ಸ್ವಾಭಾವಿಕತೆ ಕಡಿಮೆಯಾಗಿ ಕೃತ್ರಿಮ ಜೀವನ ಬೆಳೆದುಕೊಳ್ಳುತ್ತದೆ.

ಕೊಂಕಣ ಪ್ರದೇಶದಲ್ಲಿ ಜನರ ಜೀವನವನ್ನೇ ಮೊದಲು ತೆಗೆದುಕೊಳ್ಳೋಣ. ನಾನು ಈ ಮೊದಲು ಹೇಳಿದಂತೆ ಅವರ ಊಟ, ಉಡಿಗೆ–ತೊಡಿಗೆಗಳು ಅವರ ಪ್ರಾಕೃತಿಕ ಪರಿಸ್ಥಿತಿಗೆ ಅನುಗುಣವಾಗಿರುತ್ತವೆ. ಕೊಂಕಣದಲ್ಲಿ ಸಮುದ್ರ ತೀರವಿರುವುದರಿಂದ ಮೀನುಗಳು ಸಿಕ್ಕುತ್ತವೆ. ಆದ್ದರಿಂದ ಅವರ ಊಟದಲ್ಲಿ ಮೀನಿನ ಆಹಾರವು ಮುಖ್ಯವಾಗಿರುತ್ತದೆ. ವಿಜಾಪುರದಂತಹ ಬೈಲು ಸೀಮೆಯಲ್ಲಿ ಗೋಧಿ ಮತ್ತು ಜೋಳಗಳು

ಹೆಚ್ಚಾಗಿ ಬೆಳೆಯುವುದರಿಂದ ಆಹಾರವು ಮುಖ್ಯವಾಗಿ ಗೋಧಿ ಮತ್ತು ಜೋಳಗಳಿಂದ ಕೂಡಿದ್ದು ಆಗಿರುತ್ತದೆ. ಈ ಬೇರೆ ತರದ ಆಹಾರಗಳು ಅವರ ದೈಹಿಕ ಸ್ವಭಾವದ ಮೇಲೆ ಹೆಚ್ಚು ಪರಿಣಾಮ ಬೀರುತ್ತವೆ. ಮತ್ತು ಅವರ ಸಂಸ್ಕೃತಿಯು ಒಂದು ಕಡೆ ಮೀನು ಮಾರುವ ಮತ್ತು ಸಾಗಾಣಿಕೆ ಮಾಡುವ ಸಂಸ್ಕೃತಿಯಾಗಿದ್ದರೆ ಮತ್ತೊಂದು ಕಡೆ ಗೋಧಿ-ಜೋಳ ಬೆಳೆಯುವ, ಆಹಾರ ತಯಾರಿಸುವ ಮತ್ತು ಆಹಾರ ಸಾಗಿಸುವ ಸಂಸ್ಕೃತಿಯಾಗಿರುತ್ತದೆ.

ಕೊಂಕಣ ಪ್ರದೇಶಗಳಲ್ಲಿ ಸಮುದ್ರವು ತೀರ ಹತ್ತಿರ ವಿರುವುದರಿಂದ ಮತ್ತು ಘಟ್ಟಗಳಿಂದ ಸುತ್ತುವರಿದಿರುವುದರಿಂದ ಅಲ್ಲಿ ಕಾಡು ಬೆಳೆಯುತ್ತದೆ. ಹೀಗಾಗಿ ಅಲ್ಲಿಯ ಜನರು ಕಾಡಿನಲ್ಲಿ ಸಿಕ್ಕುವ ಕಟ್ಟಿಗೆ ಮತ್ತು ಹಣ್ಣು-ಹಂಪಲುಗಳ ಮೇಲೆ ತಮ್ಮ ಜೀವನವನ್ನು ಸಾಗಿಸುತ್ತಾರೆ. ಆದರೆ ವಿಜಾಪುರ ಜಿಲ್ಲೆಯಲ್ಲಿ ಗೋಧಿ - ಜೋಳ ಬೆಳೆಯಲಿಕ್ಕೆ ಹೆಚ್ಚು ಅನುಕೂಲ ಪರಿಸ್ಥಿತಿಗಳಿವೆ. ಅಲ್ಲಿ ಕಾಡುಗಳು ಬೆಳೆಯಲಿಕ್ಕೆ ಅವಕಾಶವಿಲ್ಲ. ಮಳೆಯ ಪ್ರಮಾಣ ವಿಜಾಪುರ ಜಿಲ್ಲೆಯಲ್ಲಿ ಕಡಿಮೆಯಾಗಿದೆ. ಆದ್ದರಿಂದ ಅವರು ನೀರಾವರಿಗೆ ಹೆಚ್ಚು ಸೌಲಭ್ಯತೆಗಳನ್ನು ಮಾಡಿಕೊಳ್ಳ ಬೇಕಾಗುತ್ತದೆ. ಆದರೆ ಕೊಂಕಣ ಪ್ರದೇಶದಲ್ಲಿ ಮಳೆ ಹೆಚ್ಚು ಬೀಳುವುದರಿಂದ ನೀರನ್ನು ಸಂಗ್ರಹಿಸಿ ಅದನ್ನು ವಿದ್ಯುಚ್ಛಕ್ತಿಗೆ ಮತ್ತು ಬೇರೆ ಉದ್ಯೋಗಗಳಿಗೆ ಉಪಯೋಗ ಮಾಡಿಕೊಳ್ಳಲಿಕ್ಕೆ ಹೆಚ್ಚಿಗೆ ಅನುಕೂಲವಾಗತ್ತದೆ. ವಿಜಾಪುರ ಜಿಲ್ಲೆಯಲ್ಲಿ ಸಪಾಟ ಮಾಳಿಗೆ ಮನೆಗಳನ್ನು ಕಟ್ಟಿಕೊಂಡರೆ, ಕೊಂಕಣ ಪ್ರದೇತದಲ್ಲಿ ಇಳುಜಾರಿನ ಹಂಚಿನ ಮಾಳಿಗೆಯ ಮನೆಗಳನ್ನು ಕಟ್ಟಿಕೊಳ್ಳಬೇಕಾಗುತ್ತದೆ.

ಕೊಂಕಣ ಪ್ರದೇಶದಲ್ಲಿ ಸಮುದ್ರತೀರವಿರುವುದರಿಂದ ಹವಾಮಾನದಲ್ಲಿ ಅತಿ ಹೆಚ್ಚು ಮತ್ತು ಅತಿ ಕಡಿಮೆಯ ಅಂತರವು ಬಹಳ ಕಡಿಮೆಯದಾಗಿರುತ್ತದೆ. ಆದರೆ ವಿಜಾಪುರ ಜಿಲ್ಲೆಯಲ್ಲಿ ಬೇಸಿಗೆಯಲ್ಲಿ ಹವಾಮಾನವು ಅತಿ ಉಷ್ಣದಾಯಕವಾಗಿಯೂ ಮತ್ತು ಚಳಿಗಾಲದಲ್ಲಿ ಹವಾಮಾನವು ಅತಿ ಕಡಿಮೆಯದಾಗಿಯೂ ಇರುತ್ತದೆ. ಆದ್ದರಿಂದ ವಿಜಾಪುರ ಜಿಲ್ಲೆಯ ಜನರು ಉಷ್ಣತೆಗೆ ಮತ್ತು ಚಳಿಗೆ ಅನುಕೂಲವಾಗುವ ಬಟ್ಟೆಗಳನ್ನು ತೊಡಬೇಕಾಗುತ್ತದೆ. ಆದರೆ ಕೊಂಕಣದಲ್ಲಿ ಇಂಥ ಮಾರ್ಪಾಟುಗಳನ್ನು ಮಾಡಿಕೊಳ್ಳುವ ಅವಶ್ಯಕತೆಯು ಉಳಿಯುವುದಿಲ್ಲ. ವಿಜಾಪುರ ಜಿಲ್ಲೆಯಲ್ಲಿ ಉಷ್ಣತೆಯು ಹೆಚ್ಚು ಇರುವುದರಿಂದ ಬೇಸಿಗೆಯ ಕಾಲದಲ್ಲಿ ವಿದ್ಯುಚ್ಛಕ್ತಿಯ ಫ್ಯಾನುಗಳನ್ನು ಹೆಚ್ಚಾಗಿ ಉಪಯೋಗಿಸಬೇಕಾಗುತ್ತದೆ. ಒಂದು ರೀತಿಯಿಂದ ಇಂಥ ಫ್ಯಾನುಗಳನ್ನು ಉಪಯೋಗಿಸುವುದು ಮತ್ತು ಸ್ಥಿಮಿತಗೊಳಿಸಿದ ಹವಾಮಾನದ (Air Condition) ರೂಂಗಳನ್ನು ಮಾಡಿಕೊಳ್ಳುವುದು. ಪ್ರಕೃತಿಯ ಪ್ರಭಾವವನ್ನು ವಿರೋಧಿಸಿ ಕೃತ್ರಿಮ ಹವಾಮಾನ' ಊಟ, ಉಡಿಗೆ-ತೊಡಿಗೆ ಮುಂತಾದುವುಗಳನ್ನು ಮಾಡಿಕೊಳ್ಳುವುದು ಮನುಷ್ಯನ ಬುದ್ಧಿಶಕ್ತಿಯ ಪ್ರಭಾವವಾಗಿದೆ. ಪ್ರಕೃತಿಯು ಸ್ವಾಭಾವಿಕವಾಗಿ ಕೊಡುವ



ಸೌಲಭ್ಯಗಳನ್ನು ಉಪಯೋಗ ಮಾಡಿಕೊಳ್ಳುವುದು ಮಾನವನ ಜಾಣತನವಾಗಿದೆ. ಕೊಂಕಣ ಪ್ರದೇಶದಲ್ಲಿ ಕಟ್ಟಿಗೆಯು ವಿಶೇಷವಾಗಿಸಿಗುವುದರಿಂದ ಅವರು ಮನೆಗಳನ್ನು ಕಟ್ಟಿಕೊಳ್ಳಲಿಕ್ಕೆ ವಿಶೇಷವಾಗಿ ಕಟ್ಟಿಗೆಯನ್ನು ಉಪಯೋಗಿಸುತ್ತಾರೆ. ಆದರೆ ಇಂಥ ಸೌಲಭ್ಯ ದೊರೆಯಲು ಸಾಧ್ಯವಿಲ್ಲ. ಕೊಂಕಣ ಪ್ರದೇಶ ಗುಡ್ಡ ಮತ್ತು ಕಾಡಿನಿಂದ ತುಂಬಿರುವುದರಿಂದ ಮನೆಗಳನ್ನು ಗುಡ್ಡದ ಮೇಲೆ ಮತ್ತು ಕಾಡಿನಲ್ಲಿ ಕಟ್ಟಿಕೊಳ್ಳ ಬೇಕಾಗುತ್ತದೆ. ಆದರೆ ವಿಜಾಪುರ ಜಿಲ್ಲೆಯು ಬಯಲು ಪ್ರದೇಶವಾಗಿರುವುದರಿಂದ ಅಲ್ಲಿ ಅನುಕೂಲವಾದ ಬಯಲು ಪ್ರದೇಶದಲ್ಲಿ ಹಳ್ಳಿಗಳು ಮತ್ತು ಪಟ್ಟಣಗಳು ಅಸ್ತಿತ್ವದಲ್ಲಿ ಬರುತ್ತವೆ. ಇವೆಲ್ಲ ಅಂಶಗಳು ಪ್ರಕೃತಿಯ ಪರಿಸ್ಥಿತಿಗಳು ಮಾನವ ಜೀವನದಲ್ಲಿ ಮತ್ತು ವಿಭಿನ್ನ ಸಂಸ್ಕೃತಿಗಳನ್ನು ಹುಟ್ಟಿಸಲಿಕ್ಕೆ ಹೇಗೆ ಅನುಕೂಲ ವಾಗುತ್ತವೆಂಬುದನ್ನು ತೋರಿಸುತ್ತವೆ.

**ಪರಿಸರ ಮತ್ತು ತತ್ವಶಾಸ್ತ್ರ:**

ಪೌರ್ವಾತ್ಯರು ಹೆಚ್ಚಾಗಿ ಪ್ರಕೃತಿಗೆ ಹೊಂದಿಕೊಳ್ಳುವ ಮತ್ತು ಪಾಶ್ಚಿಮಾತ್ಯರು ಪ್ರಕೃತಿಗೆ ವಿರೋಧವಾಗಿ ವರ್ತಿಸುವುದಾಗಿ ತತ್ವಶಾಸ್ತ್ರಜ್ಞರು ಹೇಳುತ್ತಾ ಬಂದಿದ್ದಾರೆ. ಪಾಶ್ಚಿಮಾತ್ಯರಲ್ಲಿ ಯಾಂತ್ರೀಕರಣ ತೀವ್ರವಾಗಿ ಬಳಕೆಯಲ್ಲಿ ಬಂದಿತು. ಪೌರ್ವಾತ್ಯರು ಯಾಂತ್ರೀಕರಣದಲ್ಲಿ ತೀವ್ರವಾಗಿ ತಮ್ಮ ಜೀವನವನ್ನು ಸಾಗಿಸದೆ ಅವರು ಪ್ರಕೃತಿಗೆ ಹೊಂದಿಕೊಂಡೇ ತಮ್ಮ ಜೀವನವನ್ನು ನಡೆಸಲಾರಂಭಿಸಿದರು. ಆದ್ದರಿಂದ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಜೀವನದಲ್ಲಿ ಬಹಳಷ್ಟು ಭಿನ್ನತೆಗಳು ಕಾಣಲಾರಂಭಿಸಿದವು. ಪಾಶ್ಚಿಮಾತ್ಯ ತತ್ವಶಾಸ್ತ್ರದಲ್ಲಿ ಕಾರ್ಯ ಮತ್ತು ಕಾರಣಗಳಲ್ಲಿ ಬಹಳಷ್ಟು ನಂಬಿಕೆ ಉಂಟಾಯಿತು. ಆದರೆ ಪೌರ್ವಾತ್ಯರಲ್ಲಿ ತಮ್ಮ ಜೀವನದಲ್ಲಿ ಆಧ್ಯಾತ್ಮ ಜೀವನಕ್ಕೆ ಬಹಳ ಮಹತ್ವ ಕೊಡಲಾಯಿತು, ಹೀಗಾಗಿ ಪೌರ್ವಾತ್ಯರಲ್ಲಿ ಸುಖ-ಸೌಲಭ್ಯವೆಂದರೆ ಆಧ್ಯಾತ್ಮ ಜೀವನವೇ ಎಂದು ವಾಡಿಕೆಯಾಯಿತು. ಆದರೆ ಪಾಶ್ಚಿಮಾತ್ಯರು ವಸ್ತುನಿಷ್ಠ (Materilistic) ಜೀವನವನ್ನು ನಡೆಸಲು ಪ್ರಾರಂಭಿಸಿದರು ಆದ್ದರಿಂದ ಪೌರ್ವಾತ್ಯರು ಆಧ್ಯಾತ್ಮ ನಿಷ್ಠ ಜೀವಿಗಳೆಂದೂ ಮತ್ತು ಪಾಶ್ಚಿಮಾತ್ಯರು ವಸ್ತು ನಿಷ್ಠ ಜೀವಿಗಳೆಂದೂ ವಾದಗಳು ಪ್ರಾರಂಭವಾದವು. ಆದರೆ ಇತ್ತೀಚಿನ ದಿನಮಾನಗಳಲ್ಲಿ ಪೌರ್ವಾತ್ಯರು ತಮ್ಮ ಆಧ್ಯಾತ್ಮ ಜೀವನದೊಂದಿಗೆ ವಸ್ತುನಿಷ್ಠ ಜೀವನವನ್ನೂ ಅಳವಡಿಸಿ ಕೊಳ್ಳುತಿದ್ದಾರೆ. ಇದಕ್ಕೆ ಆಧುನೀಕರಣ (Modernization) ಎಂದು ಕರೆಯುತ್ತಾರೆ. ಆಧುನೀಕರಣವು ಪೌರ್ವಾತ್ಯರಲ್ಲಿ ಪಾಶ್ಚಿಮಾತ್ತೀಕರಣದ ಒಂದು ನವ್ಯತೆಯೆಂದು ತಿಳಿದುಕೊಳ್ಳುವದೂ ತಪ್ಪು. ಆಧುನೀಕರಣದಲ್ಲಿ ಹೊಸ ವಿಚಾರಗಳು ಹೊಸ ಆಧ್ಯಾತ್ಮ ಜೀವನವನ್ನು ಕೊಡಲಿಕ್ಕೆ ಶಕ್ಯವಿದೆ. ಹೀಗಾಗಿ ಆಧ್ಯಾತ್ಮ ಜೀವನವೆಂದು ಹೇಳಿಕೊಂಡು ಕುರುಡು ನಂಬಿಗೆಯ ಜೀವನವನ್ನು ನಡೆಸುವದನ್ನು ಬಿಟ್ಟು ಕಾರ್ಯ-ಕಾರಣಗಳಿಗೆ ಆಧ್ಯಾತ್ಮ ಜೀವನದಲ್ಲಿಯೂ ಸ್ಥಾನ ಕೊಡುವದು ಶಕ್ಯವಿದೆ. ಹೀಗಾಗಿ ಆಧುನೀಕರಣದಲ್ಲಿ ಕೇವಲ ವಸ್ತುನಿಷ್ಠ ಜೀವನವನ್ನು ನಡೆಸುವದೆಂದು ಹೇಳುವದುತಪ್ಪು. ಅಲ್ಲಿ ಭೌದ್ಧಿಕ ಸ್ಥಾನವಿದೆ.

(ಕಳೆದ ಸಂಚಿಕೆಯಿಂದ)

## ಸಾಧಕ ಯೋಧ - ಬಸವಣ್ಣ

-ಪ್ರೊ|| ಬಿ.ಎಂ. ಪಾಟೀಲ, ಎಂ.ಎ., ಶ್ರೀ ಜ.ಪ್ರಾ ಪದವಿ ಕಾಲೇಜು, ಮಹಾಲಿಂಗಪುರ-12.

ತಾಳಮಾನವನರಿಯೆ ಓಜೆಬಜಾವಣೆಯ ಲೆಕ್ಕವನರಿಯೆ
ಅಮೃತಗೂ ದೇವಗಣವನರಿಯೆ ! -
ಕೂಡಲಸಂಗಮದೇವಾ ನಿಮಗೆ ಕೇಡಿಲ್ಲವಾಗಿ
ಅನುವೊಲಿದಂತೆ ಹಾಡುವೆ !

ಪ್ರಸ್ತುತ ಈ ವಚನವು ಹನ್ನೆರಡನೆಯ ಶತಮಾನಕ್ಕಿಂತ ಹಿಂದೆ ರೂಢಿಯಲ್ಲಿದ್ದ ಸಾಹಿತ್ಯ ರಚನೆಯ ಹಾಗೂ ಭಕ್ತನ ಭಕ್ತಿಯ ಮನೋಧರ್ಮವನ್ನು ಬಿಂಬಿಸುತ್ತದೆ. ಪರಮಾತ್ಮನ ಸಾಕ್ಷಾತ್ಕಾರವಾಗಬೇಕಾದರೆ ಭಕ್ತನಾದವನು ಛಂದಶಾಸ್ತ್ರ ಮತ್ತು ಸಂಗೀತ ಶಾಸ್ತ್ರಗಳ ಕ್ರಮಕ್ಕನುಸರಿಸಿ ಹಾಡಬೇಕಾಗುತ್ತಿತ್ತು. ಅಂದರೆ ರಾಗ, ತಾಳ, ಗಣ, ಲಯ, ಗತಿ, ಪ್ರಾಸ, ಯತಿ, ಮೊದಲಾದವುಗಳನ್ನು ಗಮನದಲ್ಲಿಟ್ಟುಕೊಂಡು "ಭಾವ" ಪೂರ್ವಕವಾಗಿ ಎಚ್ಚರದಿಂದ ಹಾಡಿದರೆ ಮಾತ್ರ ಪರಮಾತ್ಮನ ಸಾಕ್ಷಾತ್ಕಾರವಾಗುವುದು. ಒಂದು ವೇಳೆ ಈ ನಿಯಮಗಳನ್ನು ಉಲ್ಲಂಘಿಸಿ ಹಾಡಿದರೆ ಪರಮಾತ್ಮನ ಸಾಕ್ಷಾತ್ಕಾರವಾಗದು. ಅಷ್ಟೇ ಅಲ್ಲ ಹಾಡಿಸಿಕೊಂಡವರಿಗೆ ಮತ್ತು ಹಾಡಿದವರಿಗೆ ಅಮಂಗಳ ಉಂಟಾಗುವುದು ಎಂಬ ಮನೋಧರ್ಮವು ಹಿಂದಿನ ಕಾಲದಿಂದಲೂ ಗತಾನುಗತಿಯಾಗಿ ಬೆಳೆದು ಬಂದಿತ್ತು. ಸಾಹಿತ್ಯ ರಚನೆಯಲ್ಲಿಯೂ ಅಷ್ಟೇ.

ಇಂಥ ಸಂದರ್ಭದಲ್ಲಿ ಬಸವಣ್ಣನವರು " ಅನುವೊಲಿದಂತೆ ಹಾಡುವೆ " ಎಂದು ದಿಟ್ಟತನದಿಂದ ವ್ಯಕ್ತಿನಿಷ್ಠವಾದ ಭಕ್ತಿಯ ಹಾಗೂ ಸಾಹಿತ್ಯರಚನೆಯ ಮಾರ್ಗವನ್ನು ತುಳಿದದ್ದು ಅವರ ಸ್ವತಂತ್ರ ಮತ್ತು ಪ್ರಗತಿಪರ ಮನೋಭಾವನೆಗೆ ಹಿಡಿದ ಕನ್ನಡಿಯಾಗಿದೆ ಅಂದಿನ ದಿನಮಾನಗಳಲ್ಲಿ ಅನುವೊಲಿದಂತೆ ಹಾಡುವೆ ಎಂದು ಧೈರ್ಯದಿಂದ ಎದೆತಟ್ಟಿ ಘಂಟಾಘೋಷವಾಗಿ ಸಾರಿ ಭಕ್ತಿಯ ಹಾಗೂ ಸಾಹಿತ್ಯ ರಚನೆಯ ಹೊಸ ಪರಂಪರೆಗೆ ಮಂಗಳ ಹಾಡಿದ್ದು ಬಸವಣ್ಣನವರ ಮಹಾನ್ ಸಾಧನೆಗಳಲ್ಲಿ ಇದೂ ಒಂದು.

ಬಸವಣ್ಣನವರ ಹೃದಯವು ಹಾಕಿದ್ದೇ ತಾಳವಾಯಿತು. ಅವರು ಹಾಡಿದ್ದೇ ಸಂಗೀತವಾಯಿತು. ಅವರು ಬರೆದದ್ದೇ ಸಾಹಿತ್ಯವಾಯಿತು. ವೃತ್ತಗಳ ಆವೃತ್ತಗಳಿಂದ ಬಂಧಿಸಲ್ಪಟ್ಟ ಕನ್ನಡ ಸಾಹಿತ್ಯ ಶಾರದೆಯನ್ನು ಮುಕ್ತಗೊಳಿಸಿದ ಶ್ರೇಯಸ್ಸು ಬಸವಣ್ಣನವರದು. ಒಂದು ಪಕ್ಷ ಛಂದಸ್ಸಿನ ಮಿತಿಮೀರಿ ದೇಶಿಯಲ್ಲಿ ಸಾಹಿತ್ಯವನ್ನು ರಚನೆ ಮಾಡಿದರೆ ಅಂಥ ಸಾಹಿತ್ಯವನ್ನು "ಗೊರವರ ದುಂಡುಚಿಯೇ ಬೀದಿವರೆಯ ಬೀರಯ್ಯನ ಕಥೆ" ಎಂದು ಪಂಡಿತ ಮಾನ್ಯರು ಮೂಗು ಮುರಿಯುತ್ತಿದ್ದರು. ಇಂಥ

ಸಂದರ್ಭದಲ್ಲಿ ಸಾಹಿತ್ಯದ ವಸ್ತು, ಭಾಷೆ, ಶೈಲಿ ಎಲ್ಲದರಲ್ಲಿಯೂ ಹೊಸತನವನ್ನು ಪ್ರಯೋಗಿಸಿ ಜನವಾಣಿಯನ್ನು ದೇವವಾಣಿಯ ಪಟ್ಟಕ್ಕೇರಿಸಿದರು. ಆಕಾಶದ ಕುಸುಮವಾಗಿದ್ದ, ಪಂಡಿತಮಾನ್ಯರ ಗುತ್ತಿಗೆಯಾಗಿದ್ದ ಕನ್ನಡ ಸಾಹಿತ್ಯವನ್ನು ಜನಸಾಮಾನ್ಯರ ಮನೆ ಬಾಗಿಲಿಗೂ ತಂದು ಮುಟ್ಟಿಸಿದರು. ಅಲ್ಲದೆ ಜನಸಾಮಾನ್ಯರೂ ಸಾಹಿತ್ಯ ರಚನಾ ಕಾರ್ಯದಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದು ಸಾಮಾನ್ಯ ಸಾಧನೆಯೇನಲ್ಲ!

ಆತ್ಮಸಾಕ್ಷತ್ಕಾರ ಅರ್ಥಾತ್ ದೇವಸಾಕ್ಷಾತ್ಕಾರ ಹೊಂದಲು ಅನೇಕರು ಅನೇಕ ವಿಧವಾದ ಮಾರ್ಗವನ್ನು ಅನುಸರಿಸುತ್ತ ಬಂದಿದ್ದಾರೆ. ಕೆಲವರು ದೇವ ಸಾಕ್ಷತ್ಕಾರಕ್ಕಾಗಿ ಜಪ, ತಪ, ಹೋಮ, ಧೂಪ, ದೀಪ, ಮಂತ್ರ, ತಂತ್ರ, ಸ್ತೋತ್ರ ಇತ್ಯಾದಿಗಳನ್ನು ಮಾಡುತ್ತಾರೆ. ಕೆಲವರು ಏಕಾದಶಿ, ದ್ವಾದಶಿ ಮಾಡುತ್ತಾರೆ, ಇನ್ನು ಕೆಲವರು ದೇವರನ್ನು ಒಲಿಸಿಕೊಳ್ಳಲು ಒಳ್ಳೆಯದಿನ, ವಾರ ತಿಥಿ ನಕ್ಷತ್ರಾದಿಗಳನ್ನು ನೋಡಿ ನಾನಾ ಬಡಿ ಪದಾರ್ಥಗಳಿಂದ ಅಭಿಷೇಕ ಮಾಡುತ್ತಾರೆ. ಇನ್ನು ಕೆಲವರು ಹತ್ತು ಮತ್ತರ ಭೂಮಿ ನಂದಾದೀವಿಗೆ, ಬತ್ತದ ಹಯನ ಮೊದಲಾದವುಗಳನ್ನು ಕೊಟ್ಟು ದೇವರನ್ನು ಒಲಿಸಿಕೊಳ್ಳಲು ವಶೀಲಿ ಹಚ್ಚುತ್ತಾರೆ. ಮತ್ತೆ ಕೆಲವರು ಕಲ್ಲಿನ ಗುಡಿ ಕಟ್ಟಿದರೆ ಧನ-ಕನಕಗಳ ಸೌಕರ್ಯವುಳ್ಳ ಶ್ರೀಮಂತರು ಕಂಚು, ತಾಮ್ರ, ಬೆಳ್ಳಿ ಬಂಗಾರ, ವಜ್ರ ಇತ್ಯಾದಿಗಳ ಗುಡಿಗಳನ್ನು ಕಟ್ಟಿ ದೇವರ ಪ್ರೀತಿಗೆ ಪಾತ್ರರಾಗಲು ಹಂಬಲಿಸುತ್ತಾರೆ. ಇದು ಆದಿ-ಅನಾದಿಯಾಗಿ ಬಂದ ಬರುತ್ತಿರುವ ಸಾಂಪ್ರದಾಯಕ ಪದ್ಧತಿ.

ಆದರೆ-ಬಸವಣ್ಣನವರು ಈ ದೆಸೆಯಲ್ಲಿ ಅಂದರೆ ಪರಮಾತ್ಮನನ್ನು ಒಲಿಸಿಕೊಳ್ಳಲು ತುಳಿದ ಮಾರ್ಗವೂ ಹೊಸತಾದದ್ದು ಮತ್ತು ವ್ಯಕ್ತಿನಿಷ್ಠವಾದದ್ದು. ತಿನ್ನುವ ರೊಟ್ಟಿ ಅಂಬಲಿಯೇ ಶಿವನ ಪ್ರಸಾದ, ಕುಡಿಯುವ ನೀರು ತೀರ್ಥ, ಶ್ರಮದ ಬೆವರೇ ಸ್ನಾನ, ದುಡಿತದ ಹಾಡೇ ಮಂತ್ರ–ಸ್ತೋತ್ರ; ಹುಲ್ಲೇ ಪತ್ರಿ ಪ್ರೇಮವೇ ಪುಷ್ಪ, ದೇಹವೇ ದೇಗುಲ, ನಿಂತನೆಲೆಯೇ ಅವಿಮುಕ್ತ ಕ್ಷೇತ್ರ ಕಾಯಕವೇ ಕೈಲಾಶ, ಹಸಿದು ಬಂದ ಜಂಗಮವೇ ದೇವರು; ದಯವೇ ಧರ್ಮ; ನಡೆದದ್ದೇ ಶಿವಪಥ; ನುಡಿದಂತೆ ನಡೆವ ಎಂಬ ಛಲವೇ ಗುರುದೀಕ್ಷೆ; ಇತರರನ್ನು ಉಣ್ಣಿಸಿ ಉಣ್ಣುವ ಭಾವವೇ ಭಕ್ತಿ; ನಿಷ್ಠೆಯೇ ಪೂಜೆ; ಸೇವೆಯೇ ಮುಕ್ತಿ - ಹೀಗೆ ಬಸವಣ್ಣನವರು ಕಂಡು ಕೊಂಡ ದೇವರ ಕಲ್ಪನೆ ಎಷ್ಟೊಂದು ಅದ್ಭುತ; ಅವರ ವ್ರತಾಚರಣೆಗಳು ಎಷ್ಟೊಂದು ಸರಳ! ಇಂಥ ವ್ರತಾಚರಣೆಗಳಿಂದ ನಿಚ್ಚ ನಿಚ್ಚವು ಶಿವರಾತ್ರಿಯನ್ನು ಆಚರಿಸುವ ಬಸವಣ್ಣನವರಿಗೆ ಶುಭದಿನ, ವಾರ. ನಕ್ಷತ್ರಗಳೆಲ್ಲಿ? ವಿಘ್ನಗಳೆಲ್ಲಿ? ದೋಷಗಳೆಲ್ಲಿ? ದುರಿತಗಳೆಲ್ಲಿ? ಸೂತಕಗಳೆಲ್ಲಿ? ಮಡಿ-ಮೈಲಿಗೆಗಳೆಲ್ಲಿ ? ಒಟ್ಟನಲ್ಲಿ ಅಂದಃಶ್ರದ್ಧೆಯ ಮಡುವಿನಿಂದ ಪುಟದೆದ್ದ ಮಹಾನ್ ಮೇಧಾವಿ ಬಸವಣ್ಣನವರು.



ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವನೊಲಿಸುವ ಪರಿ. (ಬ.ಷ.ವ.೨೩೬)

ಪ್ರಸ್ತುತ ಈ ವಚನದಲ್ಲಿ ಬಸವಣ್ಣನವರು ಸಪ್ತ ಆಚರಣೆಗಳನ್ನು ಪಾಲಿಸಿ ಶಿವಪಥವನ್ನು ಅರಿಯುವ, ಪರಮಾತ್ಮನನ್ನು ಒಲಿಸಿಕೊಳ್ಳುವ ಪರಿಯನ್ನು ಬಹು ಮನೋಜ್ಞವಾಗಿ ಅಷ್ಟೇ ಸರಳವಾಗಿ ಹೇಳಿದ್ದಾರೆ. ದೇವಸಾಕ್ಷಾತ್ಕಾರಕ್ಕಾಗಿ ಯಾವ ಸಾಂಪ್ರದಾಯಿಕ ವ್ರತಾಚರಣೆಗಳನ್ನು ಆಚರಿಸುವ ಅಗತ್ಯವಿಲ್ಲ ಸತ್ಯ, ಶುದ್ಧ, ಪ್ರಮಾಣಿಕ, ನ್ಯಾಯನಿಷ್ಠವಾದ ಸಮ್ಯಕ್ ಜೀವನ ಪಥದಲ್ಲಿ-ನಡೆದರೆ ಸಾಕು ಪರಮಾತ್ಮನ ಸಾಕ್ಷಾತ್ಕಾರ ತಾನಾಗಿಯೇ ಆಗುವುದು ಬಸವಣ್ಣನವರು ಈ ಮೇಲೆ ಹೇಳಿದ ಸಪ್ತ ಆಚರಣೆಗಳನ್ನು ಕೇವಲ ಇತರರಿಗೆ ಮಾತ್ರ ಬೋಧಿಸುವ ಮಾತಿನ ಮಲ್ಲರಲ್ಲ. ಅವರು ತಮ್ಮ ಜೀವನದುದ್ದಕ್ಕೂ ಅವುಗಳನ್ನು ತ್ರಿಕರಣ ಪೂರ್ವಕವಾಗಿ ಅತ್ಯಂತ ಶ್ರದ್ಧೆಯಿಂದ ಪಾಲಿಸಿಕೊಂಡು ಬಂದ ಕೃತಿ ಮಲ್ಲರು.

ಹೊನ್ನಿನೊಳಗೊಂದೊರೆಯ
ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ
ನಿಮ್ಮಾಣೆ ! ನಿಮ್ಮ ಪುರಾತರಾಣೆ !
ನಿಮ್ಮ ಶರಣರಿಗಲ್ಲದೆ
ಮತ್ತೊಂದನರಿಯೆ ಕೂಡಲಸಂಗಮದೇವಾ.
(ಬ.ಷ,ವ. ೪೩೭)

ಇದೆಂಥ ಭಾಷೆ ಬಸವಣ್ಣನವರದು ! ಹಳ್ಳಿಗೆ ಹಳ್ಳಿ, ಊರಿಗೆ ಊರು, ಜಿಲ್ಲೆಗೆ ಜಿಲ್ಲೆ, ರಾಜ್ಯಕ್ಕೆ ರಾಜ್ಯ, ದೇಶಕ್ಕೆ ದೇಶಗಳನ್ನೇ ತಮ್ಮ ಸ್ವಂತ ಅಸ್ತಿಯನ್ನಾಗಿಸಿಕೊಳ್ಳಬೇಕು; ಅದು ಮಕ್ಕಳಿಗೆ, ಮೊಮ್ಮಕ್ಕಳಿಗೆ. ಮರಿಮಕ್ಕಳಿಗೆ, ಹೀಗೆ ತಲೆತಲಾಂತರವಾಗಿ ತಮ್ಮೆಲ್ಲ ವಂಶಜರಿಗೆ ಸಾಕಷ್ಟಾಗಬೇಕೆಂದು ಹಪಹಪಿಸುತ್ತ ನೂರೆಂಟು ತಂತ್ರ ಬಳಸಿ, ಯಾವ್ಯಾವದೋ ಮಾರ್ಗವಿಡಿದು ಸಂಗ್ರಹಿಸುತ್ತಲೇ ನಡೆದಿರುವ ಇಂದಿನ ಸ್ವಾರ್ಥ ಮಾನವರೆಲ್ಲಿ? ಇಂದು ನಾಳೆಗೆಂದು ತನ್ನ ಸ್ವಂತಕ್ಕಾಗಿ (ಪ್ರಾಮಾಣಿಕವಾಗಿಗಳಿಸಿದ) ಒಂದು ಅಕ್ಕಿಕಾಳನ್ನು ಸಂಗ್ರಹಿಸಲಾರೆ; ತಮ್ಮ ದಿನದಗಳಿಕೆಯಲ್ಲಿ ಜಂಗಮರಿಗಾಗಿ ಅರ್ಥಾತ್ ಸಮಾಜ ಸೇವೆಗಾಗಿ ವಿನಿಯೋಗಿಸುತ್ತೇನೆಂದು ಪ್ರಮಾಣಮಾಡಿ ಅದರಂತೆ ನಡೆದು ಜೀವನ ಸಾರ್ಥಕಗೊಳಿಸಿಕೊಂಡ ದಿಟ್ಟ ಸಾಧಕ ನಿಸ್ವಾರ್ಥ ಬಸವಣ್ಣನೆಲ್ಲಿ ? ಎಷ್ಟೊಂದು ವಿಪರ್ಯಾಸವಲ್ಲವೆ? ಎಲ್ಲವೂಪೂರ್ವ ಪಶ್ಚಿಮ!

ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು
ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು
'ಯದ್‌ಭಾವಂ ತದ್‌ಭವತಿ, ಉರಿಬರಲಿ, ಸಿರಿಬರಲಿ
ಬೇಕು, ಬೇಡೆನೆನ್ನನಯ್ಯಾ,
ಆ ನಿಮ್ಮ ಹಾರೆನು, ಮಾನವರ ಬೇಡೆನು,
ಆಣೆ ನಿಮ್ಮಾಣೆ, ಕೂಡಲಸಂಗಮದೇವಾ.

[ಬ.ಷ.ವ.೯೬೮]

ಬಸವಣ್ಣನವರು ಪರಮಾತ್ಮನನ್ನು ಧ್ಯಾನಿಸುವುದು, ಮೊರೆಹೋಗುವುದು ಮನೆ, ಕಾರು, ಹೊಲ, ಆಸ್ತಿ,ಬೆಳ್ಳಿ, ವಜ್ರ,ವೈಡೂರ್ಯಗಳಂಥ ಲೌಕಿಕ ಸಂಪತ್ತಿನ ಆಪೇಕ್ಷೆಯಿಂದಾಗಲಿ ಇಲ್ಲವೆ ಬ್ರಹ್ಮ, ವಿಷ್ಣು, ರುದ್ರರಂಥ ದೇವ ದೇವಾದಿಗಳ ಸ್ಥಾನ ಮಾನಗಳನ್ನು ಬಯಸಿ ಅವರಂಥ ವೈಭವ ವಿಲಾಸ ಜೀವನವನ್ನು ಪಡೆಯುವುದಕ್ಕಾಗಿ ಅಲ್ಲ. ತಮ್ಮ ಲೌಕಿಕ ಸುಖದ ಆಸೆ ಆಕಾಂಕ್ಷೆಗಳಿಗೋಸ್ಕರ ಅವರು ಮಾನವರನ್ನಲ್ಲ ಪರಮಾತ್ಮನನ್ನು ಬೇಡಲಾರರು. ಶಿರಹರಿದು ಅಟ್ಟೆ ನೆಲಕ್ಕೆ ಬಿದ್ದರೂ, ಆಸ್ತಿ-ಪಾಸ್ತಿಗಳನ್ನೆಲ್ಲ ಕೊಳ್ಳೆಹೊಡೆದರೂ' ಮಕ್ಕಳನ್ನು ಕಡಿದು ಖಡಿದು ತುಂಡು ತುಂಡಾಗಿ ಕತ್ತರಿಸಿದರೂ, ಹೆಂಡತಿಯನ್ನು ಕಣ್ಣೆದುರಿನಲ್ಲಿ ಮಾನಗೆಡಿಸುತ್ತಿದ್ದರೂ ,ದೇಹವನ್ನು ಶೂಲಕ್ಕೇರಿಸಿದರೂ "ರಕ್ಷಿಸು" ಕಾಪಾಡು' ಎಂದು ದೇವಮೊದಲ್ಗೊಂಡು ಯಾರಲ್ಲಿಯೂ ಅಂಗಲಾಚಿಸಿ ಮೊರೆಹೆಕ್ಕು ಬೇಡಲಾರೆನು ಎಂದು ಪ್ರಮಾಣ ಮಾಡುವ ಬಸವಣ್ಣನವರದು ಎಂಥಛಲ! ಎಂಥ ಶ್ರದ್ಧಾನಿಷ್ಠೆ ! ಎಂಥಧೈರ್ಯ !

ಒಂಧು ವೇಳೆ ಬಸವಣ್ಣನವರು ದೇವರಲ್ಲಿ ಮೊರೆ ಇಟ್ಟು ಬೇಡಿಕೊಂಡರೂ ಆ ಬೇಡಿಕೆಗಳ ಪಟ್ಟೆ ಹೀಗಿದೆ

ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯ ತಂದೆ.
ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ
ನಿಮ್ಮ ಶರಣರ ಪಾದವಲ್ಲದೆ
ಆನ್ಯವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವಾ.

[ಬ.ಷ.ವ ೫೯]

ಇನ್ನೊಂದು ವಚನ:

ಒಡೆದೋಡ ಎನ್ನ ಮನೆಯಲ್ಲಿಲ್ಲದಂತೆ ಮಾಡಯ್ಯ
ಕೊಡು ದೇವ ಎನ್ನ ಕೈಯಲ್ಲೊಂದು ಕರಿಕೆಯ
ವೃಡದೇವಾ ಶರಣೆಂಡು ಭಿಕ್ಷಕ್ಕೆ ಹೋದರೆ, ಅಲ್ಲಿ
'ನಡೆದೇವಾ' ಎಂದೆನಿಸು ಕೂಡಲಸಂಗಮದೇವಾ.

[ಬ.ಷ.ವ.೪೫೮]



ಹೀಗೆ ದೇವರಲ್ಲಿ ಮೊರೆಇಟ್ಟಿರುವ ಬಸವಣ್ಣನವರ ಬೇಡಿಕೆಗಳು ಎಷ್ಟೊಂದು ವಿಚಿತ್ರವಾದವುಗಳು! ಭಕ್ತರ ಇತಿಹಾಸದಲ್ಲಿಯೇ ಅಪರೂಪವಾದ ಬೇಡಿಕೆಗಳಿವು. ಬಹುಶ: ದೇವರಲ್ಲಿ ಇಂಥ ಬೇಡಿಕೆಗಳ ಯಾದಿಯನ್ನಿಟ್ಟು ಮೊರೆಹೊಕ್ಕವ ಕೆಚ್ಚೆದೆಯ ಭಕ್ತ ಬಸವನೊಬ್ಬನೇ!

ಬಸವಣ್ಣನವರಿಗೆ ತಾವೊಬ್ಬರೆ ಸುಧಾರಿಸಿದರೆ ಸಾಲದು; ತಮ್ಮ ಸುತ್ತಲಿನವರು ಸುಧಾರಿಸಬೇಕು;, ಅವರೆಲ್ಲ ನೆಮ್ಮದಿಯಿಂದ ಸಮಗ್ರ ಸಾಮಾಜಿಕ ಕ್ರಾಂತಿಯ ಕಣಕ್ಕೆ ಧುಮುಕಿದರು. ಅಂದು ಅವರ ಸುತ್ತಲಿನ ಸಮಾಜವು ಜಾತಿ, ಮತ, ವರ್ಗ, ವರ್ಣ, ಲಿಂಗಗಳಂಥ ಅರ್ಥಹೀನ ಅನಾಚಾರಗಳಿಂದ ಜಿಡ್ಡುಗಟ್ಟೆ ನಾರುತ್ತಿತ್ತು. ಕಾಲಿಟ್ಟಲೆಲ್ಲ ದ್ರೋಣಾಚಾರ್ಯ- ದುಶ್ಯಾಸನಂತವರು; ಕಣ್ಣುಬಿಟ್ಟಲೆಲ್ಲ ರಾವಣ, ಕೀಚಕನಂಥವರು ಗಹಗಹಿಸಿ ನಗುತ್ತಿದ್ದ ಪ್ರಹಸನಗಳೇ ಗೋಚರಿಸುತ್ತಿದ್ದವು. ಮೋಸ, ವಂಚನೆ, ಅನ್ಯಾಯ, ಅತ್ಯಾಚಾರ, ಶೋಷಣೆ, ಅಸ್ಪೃಶ್ಯತೆಯ ದೃಶ್ಯಗಳೇ ಕಣ್ಣುಕುಕ್ಕುತ್ತಿದ್ದವು. ಶೋಷಣೆಗೊಳಪಟ್ಟ ದೀನ-ದಲಿತರ ಆರ್ತಸ್ವರವೇ ಕಿವಿಗೆ ಅಪ್ಪಳಿಸುತ್ತಿತ್ತು. ಎತ್ತೆತ್ತ ನೋಡಿದರೂ ಅತ್ತತ್ತ ಪಾಚಿಗಟ್ಟಿದ ಕೊಳಚೆಯ ಮಡುವೇ ಕಾಣಿಸುತ್ತಿತ್ತು. ಇಂಥ ಬದುಕನ್ನು ನೈರ್ಮಲ್ಯಗೊಳಿಸಲು ಬಸವಣ್ಣನವರು ತುಂಬ ಶ್ರಮಿಸಿದರು. ಎಲ್ಲ ರೀತಿಯ ಶೋಷಣೆಗಳಿಗೆ ಮೂಲವಾದ ಜಾತಿ ಪದ್ಧತಿಯ ಬೇರುಗಳನ್ನು ಕಿತ್ತೆಸೆಯಲು ತಮ್ಮ ಜೀವನದುದ್ದಕ್ಕೂ ಹೋರಾಡಿದರು.

ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ
ಕುಲವೇನೋ ಆವಂದಿರ ಕುಲವೇನೋ
ಸಕಲ ಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು

(ಬ. ಷ.ವ. ೫೯೨)

ಹುಟ್ಟನಿಂದ ಕುಲದ ಮೌಲ್ಯ ನಿರ್ಧರಿಸಿ ಮಡಿ-ಮೈಲಿಗೆ ಎಂದು ಕೋತಿಯಂತೆ ಹಾರಾಡುವ ಮೂರ್ಖರಿಗೆ ಬಸವಣ್ಣನವರು ಕುಲದ ಬಗ್ಗೆ ಹೇಳಿಕೊಟ್ಟ ಅಂತಿಮ ವ್ಯಾಖ್ಯಾನವಿದು.

ದಾಸಿಪುತ್ರನಾಗಲಿ ವೇಶ್ಯಾಪುತ್ರನಾಗಲಿ
ಶಿವದೀಕ್ಷೆಯಾದ ಬಳಿಕ ಸಾಕ್ಷಾತ್
ಶಿವನೆಂದು ವಂದಿಸಿ ಪೂಜಿಸಿ ಪಾದೋದಕ
ಪ್ರಸಾದಕೊಂಬುದೇ ಯೋಗ್ಯ

(ಬ.ಷ.ವ.೧೬೯)

ಎಂದು ಗತಾನುಗತಿಯಾಗಿ ಸಾಗಿಬಂದ ದೀಕ್ಷಾ ಪದ್ಧತಿಯನ್ನು ಉಗ್ರವಾಗಿ ಖಂಡಿಸಿದ್ದಾರೆ. ಮಾದಾರ ಚನ್ನಯ್ಯ, ಡೋಹಾರ ಕಕ್ಕಯ್ಯ, ಹರಳಯ್ಯ, ಶ್ವಪಚಯ್ಯ, ಮೊದಲಾದ ಸಾವಿರಾರು ನತದೃಷ್ಟ ಶೂದ್ರರಿಗೆ ಮನುಷ್ಯತ್ವದ ದೀಕ್ಷೆಕೊಟ್ಟು ದೇವ ಪಟ್ಟಕ್ಕೇರಿಸಿದರು. ‘‘ಮಲಿತ ಭಾಂಡ”ವೆಂದು ಮೂಗುಮುಚ್ಚಿ ತಿರಸ್ಕರಿಸಿದ, ಕಾಲಿನಿಂದ ಮುಟ್ಟಲೂ ಸಹ ಹಿಂಜರಿದ ಶೂದ್ರರನ್ನು ಬಸವಣ್ಣನವರು ಅಪ್ಪ, ತಾತ, ಅಜ್ಜ, ಎಂದೆಲ್ಲ ಅಪ್ಪಿಕೊಂಡು ಮುದ್ದಾಡಿದರು. ಅಸ್ಪೃಶ್ಯ ಹರಳಯ್ಯನ ಮಗನಿಗೂ ಬ್ರಾಹ್ಮಣ ಮಧುವರಸನ ಮಗಳಿಗೂ ವಿವಾಹ ಏರ್ಪಡಿಸಿ ರಕ್ತ ಸಂಬಂಧ ಬೆಳೆಸಿದರು. ಬಹುಶಃ ಭಾರತದ ಇತಿಹಾಸದಲ್ಲಿಯೇ ಅಪರೂಪವಾದ ಘಟನೆಯಿದು. ಬಸವಣ್ಣನವರು ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದರೂ ತಾವೊಬ್ಬ ‘‘ದಲಿತರ ಬಂಧು, ಎಂದು ಅಭಿಮಾನದಿಂದ ಹೇಳಿಕೊಳ್ಳುವುದರಲ್ಲಿಯೇ ಅವರಿಗೆ ಅತ್ಯಂತ ತೃಪ್ತಿಯುಂಟು. ಜಾತಿಯ ಬೇರುಗಳನ್ನು ಸಮಾಜದಿಂದ ಕಿತ್ತೆಸೆಯಲು ಅಂದಿನ ದಿನಮಾನದಲ್ಲಿ ಬಸವಣ್ಣನವರು ತೊಟ್ಟಛಲ ಪಟ್ಟ ಪರಿಶ್ರಮ ಅಂತಿಂಥದ್ದಲ್ಲ! ಅವರು ಜಾತಿಯ ವಿರುದ್ಧ ನಡೆಸಿದ ಘರ್ಷಣೆ, ಹೋರಾಟ ಯಾರನ್ನಾದರೂ ದಂಗು ಬಡಿಸುವಂತದ್ದು.

ಇಂಥ ಪ್ರಗತಿಪರ ವಿಚಾರವಾದಿಗಳಾದ ಬಸವಣ್ಣನವರು ತಮ್ಮ ಸುತ್ತಲಿನ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ಹೊಸತನವನ್ನು ತರಲು ಇಚ್ಛಿಸಿದರು. ಆದರೆ ಸನಾತನ ವ್ಯವಸ್ಥೆಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬರಲಿಚ್ಛಿಸುವ ಪ್ರತಿಗಾಮಿಗಳು ಬಸವಣ್ಣನವರ ಪ್ರಗತಿಪರ ಧೋರಣೆಗಳನ್ನು ತೀವ್ರವಾಗಿ ಪ್ರತಿಭಟಿಸಿದರು. ಬಸವಣ್ಣನವರಿಗೆ ಮಾನಸಿಕವಾಗಿ, ದೈಹಿಕವಾಗಿ ಅನೇಕ ತೆರೆನಾದ ಹಿಂಸೆಗಳನ್ನು ಕೊಟ್ಟರು. ಹಲವಾರು ವಿಧವಾದ ಅಪವಾದಗಳನ್ನು ಹೊರಿಸಿ ನಿಂದನೆ ಮಾಡಿದರು. ಆದರೆ ಬಸವಣ್ಣನವರು ಇವ್ಯಾವುದಕ್ಕೂ ಅಂಜಲಿಲ್ಲ.

ನ್ಯಾಯ ನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ
ಲೋಕ ವಿರೋಧಿ ಶರಣನಾರಾರಿಗೂ ಅಂಜುವವನಲ್ಲ
ಕೂಡಲ ಸಂಗಮದೇವರ ರಾಜತೇಜದೊಳಿರ್ಪನಾಗಿ

(ಬ.ಷ ವ. ೭೫೬)

ಎಂದು ಪ್ರತಿಗಾಮಿಗಳಿಗೆ ಪ್ರತ್ಯುತ್ತರ ಕೊಟ್ಟರು, ಊರಿಗೇ ಊರೇಎದುರಾಗಿ ಪ್ರತಿಭಟಿಸಿದರೂ ಸತ್ಯನಿಷ್ಠರಾದ, ನ್ಯಾಯಮಾರ್ಗದಲ್ಲಿ ನಡೆದ ಬಸವಣ್ಣನವರು ಯಾರ್ಯಾರಿಗೂ ತಲೆತಗ್ಗಿಸಲಾರೆನೆಂದು ಖಡಾಖಂಡಿತರಾಗಿ ಹೇಳಿದ್ದಾರೆ. ಅನ್ಯಾಯಗಳನ್ನು ಸಹಿಸಿಕೊಂಡು ತಮ್ಮತನವನ್ನು ಮಾರಿಕೊಂಡು, ಸ್ವಾಭಿಮಾನದಿಂದ ನೂರು ವರ್ಷ ಬದುಕುವುದಕ್ಕಿಂತ ಸ್ವಾಭಿಮಾನದಿಂದ ಸತ್ಯ, ನ್ಯಾಯ, ಮಾರ್ಗವಿಡಿದು ಒಂದೇ ಒಂದು ದಿನ ಲೇಸೆನಿಸಿಕೊಂಡು ಬದುಕಿದರೂ ಆ ಬದುಕು ಸಾರ್ಥಕವಾದದ್ದು ಎಂಬುದು ಬಸವಣ್ಣನವರ ಮನೋಭಾವ.



‘‘ನಾಳೆ ಬಪ್ಪುದು ನಮಗಿಂದೇ ಬರಲಿ
ಇಂದು ಬಪ್ಪುದು ನಮಗೀಗಲೇ ಬರಲಿ
ಇದಕಾರಂಜುವರು ? ಇದಕಾರಳಕುವರು ?

.........................................................

.........................................................

(ಬ ಷ. ವ. ೭೦೧)

“ಜೋಳವಾಳಿಯವನಲ್ಲ, ವೇಳೆಯಾಳಿಯವ ನಾನಯ್ಯ
ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ
ಕೇಳು ಕೂಡಲ ಸಂಗಮದೇವಾ
ಮರಣವೇ ಮಹಾನವಮಿ”

ಹೀಗೆ ಬಸವಣ್ಣನವರು ಹಿಡಿದ ಕಾರ್ಯದಲ್ಲಿ ಸೋತರೂ ಸೋಲಲಿ, ಮರಣ ಬಂದರೂ ಬರಲಿ ಎಂದು ಆದರ್ಶ ತತ್ವಗಳನ್ನು ಅನುಷ್ಠಾನ ತರುವುದರಲ್ಲಿ ಸನ್ನದ್ಧರಾಗಿದ್ದಾರೆ. ಕುಹಕ ನಿಂದೆಗಳನ್ನಾಡುವವರನ್ನು “ಬೊಗಳುವ ನಾಯಿಗಳು” ಎಂದು ಭಾವಿಸಿ ಸತ್ಯ ನ್ಯಾಯ ಪ್ರಾಮಾಣಿಕರಾಗಿ ತಮಗೆ ಸರಿದೋರಿದ ಪಥದಲ್ಲಿ ಹಟವಾದಿಗಳಾಗಿ ಮುನ್ನುಗ್ಗಿದ್ದಾರೆ. ಒಮ್ಮೆ ಇಟ್ಟ ಹೆಜ್ಜೆಯನ್ನು ಹಿಂದಿಡುವುದು ಅವರ ಜಾಯಮಾನವೇ ಅಲ್ಲ.

ದೋಷಗಳು, ಅನಿಷ್ಟಗಳು, ಅಕೃತ್ಯಗಳು, ಅನ್ಯಾಯಗಳು, ಅತ್ಯಾಚಾರಗಳು, ದುಷ್ಟ-ದುರ್ಗುಣಗಳು ಅವು ಎಲ್ಲೇ ಇರಲಿ ವ್ಯಕ್ತಿನಿಷ್ಠವಾದ ತಮ್ಮ ಒಳಹೊರಗಿರಲಿ, ಸಮಷ್ಟಿನಿಷ್ಠವಾದ ಸಾರ್ವತ್ರಿಕವಾಗಲಿ ಅವುಗಳ ನಿರ್ಮೂಲನೆಗಾಗಿ ಹೋರಾಡುವುದು ಬಸವಣ್ಣನವರ ಮನೋಧರ್ಮ. ಕೈಗೊಂಡ ಕಾರ್ಯದ ಯಶಸ್ಸಿನ ಕೊನೆತನಕ ಅವರು ಇಟ್ಟ ಆತ್ಮವಿಶ್ವಾಸ, ತೊಟ್ಟ ಛಲ, ಪಟ್ಟ ಪರಿಶ್ರಮ, ಹೊಂದಿದ ಸಂಯಮ ಅನನ್ಯವಾದದ್ದು.

ಕೊಲ್ಲುವೆನೆಂಬ ಭಾಷೆ ದೇವನದು
ಗೆಲ್ಲುವೆನೆಂಬ ಭಾಷೆ ಭಕ್ತನದು
— —..........————— ”

[ ಬ.ಷ.ವ ೬೮೦ ]

ಎಂಬಂಥ ಮಾತಿನಲ್ಲಿ ಬಸವಣ್ಣನವರ ಮಾನಸಿಕ ಸ್ಥೈರ್ಯವನ್ನು ಮನಗಾಣ ಬಹುದು.

ಕನ್ನಡಿಗರ ಕುಲಗುರುಗಳೆಂದು ಖ್ಯಾತಿ ಪಡೆದ, ಬಸವಣ್ಣನವರ ಸಮಕಾಲಿನ ರಾದ ಅಲ್ಲಮಪ್ರಭುಗಳು ಅವರ ಸಾಧನೆಯ ಯಶಸ್ಸನ್ನು ಕುರಿತು ಹೀಗೆ ಹೇಳಿದ್ದಾರೆ

ಕವಿಸಾಧಕರೆಲ್ಲರೂ ಕಳವಳಿಸಿಕೆಟ್ಟರು
ವಿದ್ಯಾಸಾಧಕರೆಲ್ಲರೂ ಬುದ್ಧಿಹೀನರಾದರು
ಪವನಸಾಧಕರೆಲ್ಲರೂ ಹದ್ದು ಕಾಗೆಗಳಾದರು
ಜಲಸಾಧಕರೆಲ್ಲರೂ ಕಪ್ಪೆಮೀನುಗಳಾದರು
ಅನ್ನಸಾಧಕರೆಲ್ಲರೂ ಭೂತಪ್ರಾಣಿಗಳಾದರು
ಬಸವಣ್ಣ ಸದ್ಗುರುಸಾಧಕರಾಗಿ ಸ್ವಯಲಿಂಗವಾದ
ಕಾಣಾ ಗುಹೇಶ್ವರಾ.

ಅನೇಕರು ಅನೇಕ ತೆರನಾದ ಸಾಧನೆಗಳನ್ನು ಮಾಡಿದ್ದಾರೆ; ಮಾಡುತ್ತಿದ್ದಾರೆ. ಅವರೆಲ್ಲ ಮಾಡಿದ್ದು ಸ್ವಾರ್ಥಕ್ಕಾಗಿ; ತಮ್ಮ ಹೆಂಡತಿ, ಮಕ್ಕಳ ವೈಭವವಿಲಾಸದ ಭೋಗ ಜೀವನದ ಸುಖಕ್ಕಾಗಿ;, ಕೀರ್ತಿ-ವಾರ್ತೆಗಳ ಅಪೇಕ್ಷೆಗಾಗಿ ಅಂತೆಯೇ ಅವರು ಮಾಡಿದ ಸಾಧನೆಗಳೆಲ್ಲ ನಿಷ್ಫಲವಾದವು. ಬಸವಣ್ಣನವರು ಮಾಡಿದ ಸಾಧನೆ ನಿಸ್ವಾರ್ಥ ವಾದದ್ದು. ಅವರ ಹೋರಾಟ ಕೀರ್ತಿ–ವಾರ್ತೆಗಳ ಫಲಪ್ರಾಪ್ತಿಗಲ್ಲ. ತಮ್ಮ ಬದುಕನ್ನು ಹಸನುಗೊಳಿಸಿ ಅಲ್ಲಿ ಇತರರು ನೆಲೆಸುವುದಕ್ಕೋಸ್ಕರ.

ಒಟ್ಟಿನಲ್ಲಿ ಬಸವಣ್ಣನವರ ಸಾಹಸಮಯ ವ್ಯಕ್ತಿತ್ವ, ಹೋರಾಟದ ಬದುಕು, ಸಾಧನಾಪಥ ನಮಗೆಲ್ಲ ಮಾದರಿಯಾಗಿವೆ. ಪ್ರಯತ್ನಪಟ್ಟರೆ ಸತತ ಸಾಧನೆಯ ಮೂಲಕ ಸಾಮಾನ್ಯನೂ ಅಸಾಮಾನ್ಯ ವ್ಯಕ್ತಿತ್ವವನ್ನು ಪಡೆದುಕೊಳ್ಳಬಲ್ಲ ಎಂಬುದಕ್ಕೆ ಬಸವಣ್ಣನವರ ಬದುಕೇ ಒಂದು ಉತ್ತಮ ನಿದರ್ಶನ.

# ಶಿಸ್ತು

-ಟಿ. ಆರ್. ಮಹಾದೇವಯ್ಯ 578, 8ನೇ ಮುಖ್ಯ ರಸ್ತೆ, ಮಾಗಡಿ ಕಾರ್ಡ್ ರಸ್ತೆ, ವಿಸ್ತರಣ
ವಿಜಯನಗರ, ಬೆಂಗಳೂರು-40.

ನಾವು ಪ್ರಕೃತಿಯತ್ತ ಗಮನವಿಟ್ಟು ನೋಡಿದರೆ ಅಲ್ಲಿ ಸಹಜವಾಗಿಯೆ ಒಂದು ನಿಯತ ಗತಿ, ವ್ಯವಸ್ಥೆ, ಶಿಸ್ತು ಒಡೆದು ಕಾಣುತ್ತದೆ. ಜೀವಕೋಟಿಯನ್ನು ತನ್ನಲ್ಲಿ ಇಂಬಿಟ್ಟು ರಕ್ಷಿಸುವ ಪ್ರಕೃತಿ ಒಂದು ಲಯದಲ್ಲಿ ಸಾಗುತ್ತದೆ. ಆದರ ಗತಿಯಲ್ಲಿ ತಾಳ ತಪ್ಪಿತು ಎಂದರೆ ಎಂಥ ಅನಾಹುತಗಳಾಗುತ್ತವೆ ಎಂಬುದು ನಮಗೆ ಗೊತ್ತೇ ಇದೆ. ಇಲ್ಲಿ ಭೂಕಂಪ, ಅಲ್ಲಿ ಮಹಾಪೂರ. ಇತ್ತ ಭೀಕರ ಹಿಮಪಾತ. ಅತ್ತ ಮಳೆಯೆ ಇಲ್ಲದ ಭೀಕರ ಕ್ಷಾಮ. ತನ್ನಲ್ಲಿ ಕ್ರಮ ಬದ್ಧತೆ ಇದ್ದಾಗ ತಾರಕಳಾದ ಪ್ರಕೃತಿ ತೂಕತಪ್ಪಿದಾಗ ಮಾರಕಳಾಗುತ್ತಾಳೆ.

ಇಂದುವದನೆ ಕುಂದರದನೆ – ಇಲ್ಲಿ ಪ್ರಕೃತಿ ರೂಪಸಿ
ಶಕ್ತನಬಿ ರಕ್ತಮುಖಿ - ಅಲ್ಲಿ ಪ್ರಕೃತಿ ರಾಕ್ಷಸಿ

ಇಲ್ಲಿ ಚೆಲುವು, ಚೆನ್ನ, ಚೊಕ್ಕಟ, ಅಲ್ಲಿ ಭೀತಿ, ಶೋಕ, ಸರ್ವನಾಶ – ಎಂಬ ಕವಿ ಬಣ್ಣನೆ ನೆನಪಾಗುತ್ತದೆ.

ಅದರಂತೆ ಮಾನವ ಜೀವನದಲ್ಲೂ ಒಂದು ವ್ಯವಸ್ಥೆ, ಶಿಸ್ತು ಬೇಕು. ಅದು ತಪ್ಪಿದಾಗ ವ್ಯಕ್ತಿಗಷ್ಟೇ ಅಲ್ಲ ಸಮಷ್ಟಿಗೂ ಕೇಡು. ಜೀವನದಲ್ಲಿ ಶಿಸ್ತಿನ ಮಹತ್ವವನ್ನರಿತೇ ನಮ್ಮ ಹಿರಿಯರು ಮಕ್ಕಳಿಗೆ ಬಾಲ್ಯದಿಂದಲೇ ಅದು ಅಳವಡುವಂತೆ ನೋಡಿಕೊಂಡರು. ಶಾಲಾಕಾಲೇಜುಗಳಲ್ಲಿ ವ್ಯಾಯಾಮ, ಅಂಗಸಾಧನೆ, ಕ್ರೀಡೆಗಳು ಇವನ್ನ ಕಲಿಯಲು ಹಚ್ಚಿ ದೈಹಿಕ ಶಿಸ್ತಿನ ಪಾಠ ಹೇಳಿಕೊಡುತ್ತಾ ಅವರನ್ನು ಮಾನಸಿಕ ಶಿಸ್ತಿಗೆ ಒಳಪಡಿಸಿದರು. ಕ್ರೀಡಾಮನೋಭಾವವುಳ್ಳ ಶಿಸ್ತುಗಾರ ಎಂದೂ ಅವ್ಯವಸ್ಥಿತ ಚಿತ್ತನಾಗಲಾರ. ಶಿಸ್ತಿನಸಿಪಾಯಿಯಾಗಿ ಆತ ಬದುಕನ್ನು ಎದುರಿಸುತ್ತಾನೆ. ಏಕೆಂದರೆ ವ್ಯವಸ್ಥೆಯೆಂಬುದು ಅತನಿಗೆ ರಕ್ತಗತ. ಕೊನೆಗದು ಆವನಿಗೆ ಒಂದು ಜೀವನ ಕ್ರಮವಾಗಿ ಬಿಡುತ್ತದೆ. ಇದರಿಂದ ದ್ವಿಮುಖ ಲಾಭ ಒಂದು ಆ ವ್ಯಕ್ತಿಗೆ, ಇನ್ನೊಂದು ಅತನು ವಾಸಿಸುವ ಸಮಾಜಕ್ಕೆ, ನಾಡಿಗೆ.

ಯಾರೇ ಆಗಲಿ ತಮ್ಮ ಅನುಕೂಲಕ್ಕೆ ತಕ್ಕಂತೆ ಬೆಳಿಗ್ಗೆ ಎದ್ದು ವಾಯುವಿಹಾರ ಮುಗಿಸಿಬಂದು, ಮಿಂದು ಮಡಿಯುಟ್ಟು ದೇವರಪೂಜೆಮಾಡಿ ಮುಂದಿನ ಕೆಲಸಕ್ಕೆ ಕೈಹಚ್ಚುವುದು ರೂಢಿ. ಇದರ ಹಿಂದಿನ ಉದ್ದೇಶ ಬಹಳ ದೊಡ್ಡದಿದೆ. ದೇಹವನ್ನು ಶುಚಿಗೊಳಿಸಿಕೊಂಡಂತೆ ಮಡಿವಸ್ತ್ರಧರಿಸಿಕೊಂಡಂತೆ ಮನಸ್ಸನ್ನೂ ನಿರ್ಮಲ



ಮಾಡಿಕೊಂಡು, ಪೂಜೆ – ಧ್ಯಾನದಿಂದ ಅದನ್ನು ಪ್ರಸನ್ನ, ಪ್ರಶಾಂತವಾಗಿಸಿಕೊಳ್ಳುವುದು ಅಂದಿನ ದಿನದ ಕಾರ್ಯ ಭಾರವನ್ನು ಸಮರ್ಥಕವಾಗಿ ನಿರ್ವಹಿಸಲು ಚೈತನ್ಯ ತುಂಬುವುದು ಈ ಶಿಸ್ತಿನ ಉದ್ದೇಶ.

ಶಿಸ್ತೆಂದರೆ ಓರಣ, ಶಿಷ್ಟಪಾಲನೆ, ಕ್ರಮಬದ್ಧತೆ. ಇದು ಯಾರಿಗೆ ಬೇಡ, ಹೇಳಿ. ವಾಹನ ಚಾಲಕರು ರಸ್ತೆನಿಯಮ ಪಾಲನೆಯ ಶಿಸ್ತನ್ನು ಪಾಲಿಸದಿದ್ದರೆ ಅಪಘಾತಗಳ ಸಂಖ್ಯೆಗೆ ಮಿತಿ ಮೀರುತಿತ್ತೆ? ವ್ಯವಸ್ಥೆ ಎಂಬುದು ಜೀವನದಲ್ಲಿ ಎಲ್ಲಾ ಕಡೆ ಕೂಡಿ ಬರಬೇಕು. ಮನೆ, ಶಾಲೆ, ಕಚೇರಿ, ಮಾರುಕಟ್ಟೆ, ಸಭೆ-ಸಮಾರಂಭಗಳಲ್ಲೂ ಅದು ಬೇಕು. ಅದಿಲ್ಲದಿದ್ದರೆ ಗೊಂದಲ, ಆಘಾತ; ಸಮಯ ಹಾಗೂ ಹಣ ಪೋಲು. ಶಿಸ್ತಿರುವೆಡೆ ಸಮಯ ಪ್ರಜ್ಞೆ, ನೈರ್ಮಲ್ಯ ಪ್ರಜ್ಞೆ, ನಡೆವಳ-ನುಡಿವಳಿಗಳ ಔಚಿತ್ಯ ಜ್ಞಾನ, ಆಹಾರ-ವಿಹಾರಂಗಳಲ್ಲಿ ಕ್ರಮಬದ್ಧತೆ ಇವುಸಹಜವಾಗಿಯೇ ಇರುತ್ತವೆ.

ಆದರೆ ಇದನ್ನು ಪಾಲಿಸುವುದು ಅಷ್ಟು ಸುಲಭವಲ್ಲ. ಸೌಲಭ್ಯಕಾಂತಿಯಾದ ಮನಸ್ಸು ಇದನ್ನು ಉಲ್ಲಂಘಿಸಲು ಸದಾ ತುದಿಗಾಲ ಮೇಲೆಯೇ ನಿಂತಿರುತ್ತದೆ. ಅಂಗ ಸಾಧನೆ ಮಾಡ ಹೋದರೆ ಮೈನೋವು ಎಂದು ಮೈಗಳ್ಳತನದಿಂದ ಮೆಲ್ಲಗೆ ಜಾರಿ-ಕೊಳ್ಳುತ್ತಾನೆ. ಇಂಥ ನುಸುಳು ಬುದ್ಧಿಯಿಂದ ತೋರಿಕೆಯ ಶಿಸ್ತು ಕಾಣಿಸೀತು. ಆದರೆ ಇದರಿಂದ ಯಾವ ಫಲವೂ ಇಲ್ಲ.

ಜೊತೆಗೆ ಶಿಸ್ತು ತೋರಿಕೆಯಾದರೆ ಅಪಾಯವೇ. ಉದಾಹರಣೆಗೆ ಅಂತರಂಗ ಶುದ್ಧಿಗೆ ಕಾರಣವಾಗುವ ಸ್ನಾನ, ಅದನ್ನು ಪ್ರಸನ್ನಗೊಳಿಸುವ ಧ್ಯಾನ ಯಾಂತ್ರಿಕವಾದರೆ?

ದಾಸರು ಹಾಸ್ಯಮಾಡಿರುವಂತೆ ಮಿಂದೆವೆಂದು ಗಡ-ಗಡ ನಡುಗುತ ಬೂಟಕ ತನದಲಿ ಗಣ-ಗಣ ಗಂಟೆಯ ಬಾರಿಸಿ, ಗುಣ-ಗುಣ ಮಂತ್ರವ ಪಠಿಸಿ, ಮನದಲಿ ಪರರ ಗಂಟ ಎತ್ತಿಹಾಕುವ ಚಿಂತೆಯಲ್ಲಿದ್ದರೆ? ಇಂಥ ಶಿಸ್ತು ಇನ್ನೊಬ್ಬರನ್ನು ಬೇಸ್ತು ಬೀಳಿಸಲಿಕ್ಕೆ ಅಷ್ಟೆ.

ಶರಣರು ನಿಸ್ವಾರ್ಥವೂ ಪರೋಪಕಾರವಾದ ಕ್ರಮಬದ್ಧ ಜೀವನವನ್ನು "ಲೇಸಿನಬಾಳು" ಎಂದು ಕರೆದಿದ್ದಾರೆ. ಲೇಸೆನಿಸಿಕೊಂಡು ಒಂದು ದಿನ, ಬೇಡ ಒಂದು ಘಳಿಗೆ ಬಾಳಿದರೆಸಾಕು ಎಂದರವರು. ಇದು ಅವರು ಶಿಸ್ತಿನ ಜೀವನವನ್ನು ಎತ್ತಿ ಹಿಡಿದ ರೀತಿ.

ಸ್ವತ: ಶಿಸ್ತುಗಾರನಲ್ಲದ ಅಧ್ಯಾಪಕ ಮುಗ್ಧಮಕ್ಕಳಿಗೇನು ಕಲಿಸಿಯಾನು? ಕ್ರಮಬದ್ಧಜೀವನ ನಡೆಸದ ಮನೆಯ ಹಿರಿಯ ಕುಟುಂಬದದವರಿಗೆ ಯಾವ ಆದರ್ಶ

ತೋರಿಯಾನು ? ಸ್ವತಃ ವ್ಯವಸ್ಥಿತ ಜೀವನ ನಡೆಸದ ಜನನಾಯಕ ಎಷ್ಟರ ಮಟ್ಟಿಗೆ ಜನರನ್ನು ಮುನ್ನಡೆಸಿಯಾನು ; ನಾಡಗುಡಿಯ ಕಟ್ಟಿಯಾನು ? ಎಲ್ಲಿ ತೀರಾ ಅತ್ಯಗತ್ಯವಾಗಿ ವ್ಯವಸ್ಥೆ ಇರಬೇಕೋ ಅಲ್ಲಿ ಅದು ಕಾಣಿಸದಾದರೆ ಗತಿಯೇನು ? ಹೀಗಾದ್ದರಿಂದಲೇ ಗಾಂಧೀಜಿ ಕೊರಗಿದರು. ಉಪ್ಪು ತನ್ನ ರುಚಿಕೊಡುವ ಗುಣವನ್ನು ನೀಗಿಕೊಂಡರೆ ಅದನ್ನೆಲ್ಲಿಂದ ತುಂಬುವುದು ?

ನಮ್ಮ ಸಮಕಾಲೀನ ಜೀವನದ ಎಲ್ಲಾ ರಂಗಗಳಲ್ಲೂ ಅಶಿಸ್ತು ನಾಟ್ಯವಾಡುತ್ತಿದೆ. ಸ್ವಾತಂತ್ರ್ಯವೆಂದರೆ ಸ್ವಚ್ಛಂದವೆಂಬ ತಪ್ಪುಭಾವನೆ ಬಿಟ್ಟ ವಿಷಫಲವಿದು ಎಂದು ಕಾಣುತ್ತದೆ. ಸಮಾಜದಲ್ಲಿ ಶಾಂತಿ-ಸಮಾಧಾನ ನೆಲೆಸಿ ಅಭ್ಯುದಯ ಸಾಧಿತವಾಗಬೇಕಾದರೆ ನಮಗೆ ಇಂದು ತುರ್ತಾಗಿ ಬೇಕಾಗಿರುವುದು ಕ್ರಮಬದ್ಧ ಜೀವನ ಶಿಸ್ತುಪಾಲನ.

ಇನ್ನೊಂದು ಮಾತು. ಎಲ್ಲಿ ನೈರ್ಮಲ್ಯ, ಚೊಕ್ಕಟತೆ, ಶುದ್ಧತೆ ಇರುತ್ತದೋ ಅಲ್ಲಿ ದೈವಿಕತೆ ಇರುತ್ತದೆ ಎಂಬ ಮಾತೊಂದಿದೆ. ನಮ್ಮ ಬದುಕು ಅಚ್ಚುಕಟ್ಟಿನಿಂದ ಕೂಡಿದರೆ, ವ್ಯವಸ್ಥೆ, ಶಿಸ್ತು ಅಳವಟ್ಟರೆ ಅದು ದೈವಿಕವಾಗುತ್ತದೆ, ತಾರಕವಾಗುತ್ತದೆ.

# ಭಾರತೀಯ ಸಮಾಜಕ್ಕಂಟಿದ ರಕ್ತಸಿಕ್ತ ಪಿಡುಗು-ಭಯೋತ್ಪಾದನೆ

ಎಂ. ನಾಗರತ್ನ, ಶಿವರ, ನಂ.8., ಮುನಿರಾಯಪ್ಪಗಾರ್ಡನ್, ಗೆದ್ದಲಹಳ್ಳಿ ಬೆಂಗಳೂರು-94

ಭಾರತ ಹಿಂದಿನ ಕಾಲದಿದೆಂಲೂ ಶಾಂತಿಗೆ ಹೆಸರುವಾಸಿಯಾದ ದೇಶ. ಧರ್ಮ
ಭೂಮಿ, ಕರ್ಮಭೂಮಿ ಅಂತೆಲ್ಲಾ ಹೆಸರು ಗಳಿಸಿಕೊಂಡಿದೆ. ಭಾರತದಲ್ಲಿ ಹುಟ್ಟಿದರೆ
ಮುಕ್ತಿಸಾಧ್ಯ ಎಂಬುದು ಪ್ರಾಚೀನ ಚೀನಿಯರ ನಂಬಿಕೆಯಾಗಿತ್ತು. ಶಾಂತಿಯಿಂದ
ಬಾಳಬೇಕಾದರೆ ಭಾರತದಲ್ಲಿ ನೆಲಸಬೇಕು ಎಂಬುದು ಪಾಶ್ಚಿಮಾತ್ಯರ ನಂಬಿಕೆಯಾಗಿತ್ತು.
ಭಾರತೀಯರ ಸಹೃದಯತೆಯಂತೂ ವಿಶ್ವಮಾನ್ಯತೆ ಪಡೆದ ವಿಷಯವಾಗಿತ್ತು. ನಮ್ಮ
ಸಂಸ್ಕೃತಿ, ಪ್ರಾಚೀನ ಸಂಸ್ಕೃತಿಗಳಲ್ಲೊಂದಾಗಿದ್ದ ಆದರ್ಶ ಸಂಸ್ಕೃತಿ ಎಂಬಬಿರುದು
ಪಡೆದಿತ್ತು. ಪ್ರಪಂಚದಲ್ಲೇ ಮೊಟ್ಟಮೊದಲಿಗೆ ಅಹಿಂಸೆಯಿಂದಲೇ ಸ್ವಾತಂತ್ರ್ಯಪಡೆದು
ಕೊಂಡು ಶಾಂತಿಯ ಕಿರೀಟಕ್ಕೆ ಹೆಮ್ಮೆಯ ಮತ್ತೊಂದು ಗುರಿ ಸೇರಿಸಿಕೊಂಡಿತು.

ಇಷ್ಟೆಲ್ಲಾ ಹೆಸರುವಾಸಿಯಾಗಿದ್ದ ದೇಶ ತಪ್ಪಿದ್ದೆಲ್ಲೋ! ಕಳೆದ 20 ವರ್ಷ
ಗಳಿಂದೀಚೆಗೆ ಮೇಲಿನ ನಂಬಿಕೆಗಳೆಲ್ಲಾ ಕ್ರಮೇಣ ಬುಡಮೇಲಾಗುತ್ತಾ ಬಂದಿವೆ.
ಶಾಂತಿದೂತ ಕ್ರಾಂತಿದೂತ ಆಗುತ್ತಿದ್ದಾನೆ. ಅಹಿಂಸಾವಾದಿ ಹಿಂಸಾವಾದಿಯಾಗುತ್ತಿದ್ದಾನೆ.
ಸದುದ್ದೇಶ ಸದ್ಗುರಿ ಪರೋಪಕಾರಗಳೇ ಆಹಾರವಾಗಿದ್ದವನಿಗೆ ಮನುಷ್ಯನ ನೆತ್ತರು
ಮಜ್ಜೆ, ಮಾಂಸ ಆಹಾರವಾಗ ತೊಡಗಿವೆ. ಸ್ನೇಹ, ಸೌಹಾರ್ದತೆ, ಪರೋಪಕಾರ
ಗುಣಗಳು ಹೇಳ ಹೆಸರಿಲ್ಲದೆ ತೊಲಗಿ ದ್ವೇಷ, ಅಸೂಯೆ, ಮತ್ಸರ, ಕಪಟಗಳು ಜನ
ಜನರ ಮನ ಮನದಲ್ಲೂ ತಾಂಡವಾಡುತ್ತಿವೆ. ಯಾವೊಬ್ಬ ಭಾರತೀಯನಾದರೂ
ಯಾವುದಾದರೊಂದು ಮೂಲೆಯಲ್ಲಿ ನಿಶ್ಚಿಂತೆ ನೆಮ್ಮದಿಯಿಂದ ಬಾಳಲುಂಟೆ ? ಜೀವ
ಹಾನಿಭಯ, ಮಾನಹಾನಿಭಯ, ಆಸ್ತಿ ಪಾಸ್ತಿ ಹಾನಿಭಯ ಒಂದೇ ? ಎರಡೇ?
ಜನರಿಗೆ ನೆಮ್ಮದಿಯ ಬದುಕು ಮಾಯವಾಗಿ ಬೇಗುದಿಯ ಬದುಕು ಅಸಹನೀಯ
ವಾಗ ತೊಡಗಿದೆ. ಇಷ್ಟಕ್ಕೆಲ್ಲಾ ಕಾರಣ ಭಾರತೀಯ ಸಮಾಜವನ್ನು ರಕ್ತಸಿಕ್ತ
ಗೊಳಿಸುತ್ತಿರುವ ಭಯೋತ್ಪಾದನೆ ಎಂಬ ಪಿಡುಗು. ಇತ್ತೀಚಿನ ದಿನಗಳಲ್ಲಿಯೇ ಈ
ಪಿಡುಗು ಹೆಮ್ಮರವಾಗಿ ಬೆಳೆಯ ತೊಡಗಿದೆ. ಇದು ಮತ್ತಷ್ಟು ದೊಡ್ಡದಾಗಿ ಬೆಳೆ
ಯುವ ಮೊದಲೇ ಇದಕ್ಕೆ ಪರಿಹಾರ ಕಂಡು ಹಿಡಿಯದಿದ್ದರೆ ಮತ್ತೂ ಅಪಾಯ
ಕಾದಿದೆ. ಈ ಬಗ್ಗೆ ಗಂಭೀರವಾಗಿ ಯೋಚಿಸ ಬೇಕಾದ ಸಂದರ್ಭ ಬಂದೊದಗಿದೆ.
ಈಗಲೂ ಉದಾಸೀನ ತಾಳಿದರೆ ಪರಿಸ್ಥಿತಿ ಕೈ ಮೀರಿ ಹೋಗುವುದರಲ್ಲಿ ಸಂದೇಹವಿಲ್ಲ,

ಈ ಬಗ್ಗೆ 20 ವರ್ಷಗಳ ಹಿಂದೆ ನಾಲ್ಕಾರು ಮಂದಿಯೋ ಮಕ್ಕಳೋ ಕೆರೆಗೋ
ಕೊಳಕ್ಕೋ ಬಿದ್ದು ಸತ್ತ ಸುದ್ದಿಯೋ, ವಿದ್ಯುತ್‌ತಂತಿ ಮುಟ್ಟಿ ಮಕ್ಕಳು ಸತ್ತ
ವಿಷಯ ಆಕ್ಸಿಡೆಂಟಾಗಿ ನಾಲ್ಕಾರು ಜನ ಸತ್ತ ವಿಷಯವೋ ಪತ್ರಿಕೆಗಳಲ್ಲಿ



ಪ್ರಕಟವಾದರೆ, ಅಥವಾ ಅವರಿವರಿಂದ ಗೊತ್ತಾದರೆ ಏನೋ ಅನಾಹುತವಾದವರಂತೆ
ಪರಿತಪಿಸುತಿದ್ದರು ಜನ. ವಿಷಯ ತಿಳಿದ ಪ್ರತಿಯೊಬ್ಬರ ಮಾತುಗಳೂ ಅ
ದುರ್ಘಟನೆಗಳ ಸುತ್ತಲೂ ಸುತ್ತಿ ಆದ ಅನಾಹುತಕ್ಕೆ ಕಾರಣ, ಪರಿಹಾರ ಕಂಡು
ಹಿಡಿಯುವ ಪ್ರಯತ್ನಗಳು ನಡೆಯುತ್ತಿದ್ದವು. ಅಕಾಲ ಮರಣ ಹಾಗೂ ಅನಾಹುತ
ಗಳಿಗೆ ಜನರು ಭಯಭೀತರಾಗುತ್ತಿದ್ದರು. ಅವುಗಳನ್ನು ತಡೆಗಟ್ಟುವ ಮಾರ್ಗ
ಹುಡುಕುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಕಾಶ್ಮೀರದಲ್ಲಿ ಉಗ್ರಗಾಮಿಗಳ
ಗುಂಡಿಗೆ 23ಬಲಿ ಎಂದೋ ಅಸ್ಸಾಂನಲ್ಲಿ ಮನೆಗಳಿಗೆ ಬೆಂಕಿಹಚ್ಚಿ 30 ಮಂದಿಯ
ಸಜೀವ ದಹನ ಎಂದೋ, ಪಂಜಾಬಿನಲ್ಲಿ ಬಾಂಬ್ ಸ್ಫೋಟದಿಂದ ಇಂತಿಷ್ಟು ಮಂದಿ
ಸಾವುಎಂದೋ ಸುದ್ದಿ ಪ್ರತಿನಿತ್ಯ ಇದ್ದೇ ಇರುತ್ತದೆ. ಇಂತಹ ಸುದ್ದಿ ಎಷ್ಟು ಸರ್ವೇ
ಸಾಮಾನ್ಯವಾಗಿದೆ ಎಂದರೆ ಪಕ್ಕದ ಮನೆಯಲ್ಲಿಯೋ, ಪಕ್ಕದಬೀದಿಯಲ್ಲಿಯೋ,
ಕೊಲೆಯೋ, ಸುಲಿಗೆಯೋ, ದರೋಡೆಯೋ ನಡೆದರೂ ಕೂಡ ಜನ ಏನೋ
ಗಲಾಟೆ ನಡೆದಿದೆಯಂತೆ ಯಾರದೋ ಕೊಲೆಯಾಗಿದೆಯಂತೆ ಎಂದು ಮಾತಾಡಿಕೊಂಡು
ನಿರ್ಲಿಪ್ತರಾಗಿ ಇದ್ದು ಬಿಡುತ್ತಾರೆ. ಈನಿರ್ಲಿಪ್ತತೆಗೆ ಜನರ ಉದಾಸೀನ ಅಥವಾ ಬೇಜವಾ
ಬ್ದಾರಿತನಕಾರಣವಲ್ಲ. ವ್ಯಾಪಕವಾಗಿ ಹರಡುತ್ತಿರುವ ಹಿಂಸಾಪ್ರವೃತ್ತಿಯೇಕಾರಣ.
ಅತಿಯಾದರೆ ಯಾವುದರ ಬಗೆಗಾದರೂ ಕಾಳಜಿಕಡಿಮೆಯಾಗುವುದು ಸಹಜ.

ನಿರುದ್ಯೋಗ, ಬಡತನ, ಮೌಢ್ಯ, ಅನಕ್ಷರತೆಗಳಂತಹ ಕಿತ್ತುತಿನ್ನುವಸಮಸ್ಯೆಗಳು
ಒಂದೆಡೆಯಾದರೆ, ಕ್ರೌರ್ಯ,ಹಿಂಸೆ ಭಯೋತ್ಪಾದನೆಗಳು ಮತ್ತೊಂದೆಡೆ ಮಾನವನ
ಮನಸ್ಸು ವಿಕೃತಗೊಂಡು ವಿಕಟಾಟ್ಟಹಾಸ್ಯಗೈಯುಲು ತೊಡಗಿದ್ದು ಏಕೋ? ಇದಕ್ಕೆ
ಪರಿಹಾರವೇ ಇಲ್ಲವೇ ?

ಇತ್ತೀಚಿನ ವರ್ಷಗಳಲ್ಲಿ ಉಗ್ರಗಾಮಿಗಳ ಉಗ್ರವರ್ತನೆ, ಭಯೋತ್ಪಾದಕರ
ಭಯೋತ್ಪಾದನೆ ಮನೆಮಾನೆಯ ಮಾತಾಗಿದೆ. ಈಭಯೋತ್ಪಾದಕರು, ಉಗ್ರಗಾಮಿ
ಗಳುಯಾರು ? ಈಪ್ರಶ್ನೆಗೆ ಉತ್ತರ ಎಷ್ಟು ವಿಪರ್ಯಾಸದಿಂದ ಕೂಡಿದೆ ಎಂದರೆ!
ಸಮಾಜದಲ್ಲಿ ಬೆಳೆಯುತ್ತಿರುವ ನೈತಿಕತೆಯ ಅಧಃಪತನಕ್ಕೆ ಇದಕ್ಕಿಂತ ಬೇರೆ ಉದಾಹರ
ಣೆಯಿಲ್ಲ. ಅದೆಂದರೆ ದೇಶದ ಪ್ರಗತಿಗೆ ಬೆನ್ನೆಲುಬಾಗಿರಬೇಕಾಗಿರುವ 'ಯುವಜನ'! ಈ
ಯುವಜನ ಏಕೆ ನಿರಾಶಾವಾದಿಗಳಾಗಿದ್ದಾರೆ! ಏಕೆ ನೀತಿಭ್ರಷ್ಟರಾಗಿದ್ದಾರೆ? ಏಕೆ
ಹಿಂಸಾವಾದಿಗಳಾಗಿದ್ದಾರೆ? ಏಕೆ ಭ್ರಮನಿರಸನಗೊಂಡಿದ್ದಾರೆ? ಏಕೆ ದೇಶದ
ಅಧೋಗತಿಗೆ ಕಾರಣರಾಗುತ್ತಿದ್ದಾರೆ? ಹೀಗೆ ಕೇಳುತ್ತಾ ಹೊರಟರೆ ಹತ್ತಾರು
ಪ್ರಶ್ನೆಗಳು. ಬಡತನ, ನಿರುದ್ಯೋಗ, ಶಿಕ್ಷಣಪದ್ಧತಿಯಲ್ಲಿರುವ ದೋಷ, ಸಾಮಾಜಿಕ
ಕಟ್ಟುಕಟ್ಟಳೆಗಳಲ್ಲಿರುವ ದೋಷ, ಯುವಜನತೆಗೆ ಇರಬೇಕಾದ ಉತ್ತಮ ಭವಿಷ್ಯದ
ಅವಕಾಶದ ಕೊರತೆ ಹೀಗೇ ಹೇಳುತ್ತಾ ಹೋದರೆ ಉತ್ತರಗಳು ಹತ್ತಾರು. ಎಲ್ಲಾ
ನಿರಾಶೆಯ ಉತ್ತರಗಳೇ.

ಈ ಸಮಸ್ಯೆಗಳಿಗೆಲ್ಲಾ ಪರಿಹಾರಕಂಡು ಹಿಡಿಯ ಬೇಕಾಗಿರುವವರು ಯಾರು? ಅದು ಯುವ ಜನಾಂಗತಾನೆ? ಒಬ್ಬ ವ್ಯಕ್ತಿ ನಾಲ್ಕಾರು ತಿಂಗಳುಗಳ ತರಬೇತಿಯಿಂದ ಉಗ್ರಗಾಮಿ, ಭಯೋತ್ಪಾದಕ ಆಗಿ ದೇಶಕ್ಕೇ ತಲೆನೋವಾಗ ಬಲ್ಲನಾದರೇ ಅಂತಹ ಹತ್ತಾರು ನೂರಾರು ಮಂದಿ, ಸಾವಿರಾರು ಮಂದಿ ಶಾಂತಿ, ನೈತಿಕತೆ, ಸೌಹಾರ್ದತೆಯ ಬೀಜ ಬಿತ್ತಲಾರರೆ? ತಮ್ಮಂತಹ ಯುವ ಜನತೆಗೆ ತಕ್ಕ ತರಬೇತಿ ನೀಡಲಾರರೆ? ನಮ್ಮ ಯುವ ಜನರಂತೂ ಕೆಲಸ ದೊರಕಿಸಿ ಕೊಡದುದಕ್ಕಾಗಿ ಶಿಕ್ಷಣ ಪದ್ಧತಿ ಸಮಾಜ ಹಾಗೂ ಸರ್ಕಾರವನ್ನು ದೂರುತ್ತಾ ಕೈಕಟ್ಟಿಕೊಂಡು ಕುಳಿತುಕೊಳ್ಳುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಬಿಟ್ಟಿದ್ದಾರೆ. ಅವರು ತಮ್ಮ ಸ್ವಸಾಮರ್ಥ್ಯದ ಬಗ್ಗೆ ನಂಬಿಕೆಯನ್ನೇ ಕಳೆದುಕೊಂಡಿದ್ದಾರೆ. ಒಂದೋ ಎರಡೋ ನಾಲ್ಕೋ ಡಿಗ್ರಿಗಳನ್ನು ಮುಗಿಸಿ ಸರಕಾರ ಕೊಡುವ ಕೆಲಸಕ್ಕಾಗಿ ವರ್ಷಗಟ್ಟಲೆ ಕಾಯುತ್ತಾ ಕುಳಿತಿರುವುದೇ ಅವರ ಅಭ್ಯಾಸವಾಗಿ ಹೋಗಿದೆ. ವಿದ್ಯೆಗೂ ಕೆಲಸಕ್ಕೂ ಎಲ್ಲಿಯ ನಂಟು? ಎಂಬುವ ಯೊಚನೆಯೇ ಅವರಿಗೆ ಹೊಳೆಯದಷ್ಟು ನಿಶ್ಕ್ರಿಯರಾಗಿ ಬಿಟ್ಟಿದ್ದಾರೆ. ಅವರು ಭಾರತದ ಯುವಜನಾಂಗದ ಅಮೂಲ್ಯವಾದ ಜೀವನದ ತಿರುಳಾದ 25ರಿಂದ35ರವರಗಿನ ಅಮೂಲ್ಯವಾದುವಯಸ್ಸು ಅಂದರೆ ಭಾರತೀಯ ಯುವ ಜನತೆಯ ಸರಿಸುಮಾರು 10ವರ್ಷ ವ್ಯರ್ಥವಾಗಿ ಹಾಳಾಗುತ್ತಿದೆ. ಬುದ್ಧಿವಂತ ಯುವ ಜನರನೇಕರು ಮಾಡಲು ಕೆಲಸವಿಲ್ಲದ ಕಾರಣ ಹಿಂಸೆ ಹಾಗೂ ಅನೈತಿಕತೆಯ ದಾರಿ ಹಿಡಿಯ ತೊಡಗಿದ್ದಾರೆ.

ನಮ್ಮ ಶಿಕ್ಷಣ ಪದ್ಧತಿ ಸಾಮಾಜಿಕ ವ್ಯವಸ್ಥೆ, ಸರ್ಕಾರ ಯುವ ಜನತೆಯ ಬಗೆಗೆ ತೋರುತ್ತಿರುವ ಧೋರಣೆ, ಪೋಷಕರ ಧೋರಣೆ ಇವೆಲ್ಲಾ ನೂರಕ್ಕೆ ನೂರು ಸರಿ ಎಂದೇನೂ ನನ್ನವಾದವಲ್ಲ. ಈ ಎಲ್ಲ ವ್ಯವಸ್ಥೆಯಲ್ಲಿಯೂ ಉಪಯುಕ್ತ ಅಂಶಗಳು ಎಷ್ಟಿವಿಯೋ ಅಷ್ಟೇ ಪ್ರಮಾಣದ ಲೋಪದೋಷಗಳೂ ಇವೆ. ಆದರೆ ಇರುವ ಲೋಪ ದೋಷಗಳನ್ನು ತಿದ್ದಬೇಕಾಗಿರುವವರು ಯಾರು? ಆದು ಯುವಜನರ ಕರ್ತವ್ಯವಲ್ಲವೆ? ಯಾವೊಬ್ಬವ್ಯಕ್ತಿಯೂ ತನ್ನ 18-20ನೇ ವಯಸ್ಸಿನವರೆಗೆ ಆರ್ಥಿಕವಾಗಿ ಪರಾವಲಂಬಿಯಾಗಿರುತ್ತಾನೆ. ಸ್ವಂತಕಾಲಿನ ಮೇಲೆ ನಿಲ್ಲುವ ಸಾಮರ್ಥ್ಯ ಅವನಿಗಿರುವುದಿಲ್ಲ. ತಂದೆ ತಾಯಿಯರೋ ಮತ್ತೊಬ್ಬರೋ ತೋರಿದ ದಾರಿಯಲ್ಲಿ ಅವನು ನಡೆದಿರುತ್ತಾನೆ. ಆದರೆ ಯುವಾವಸ್ಥೆ ತಲಪುತ್ತಿದ್ದಂತೆಯೇ ಯೋಚನಾಶಕ್ತಿ ಬೆಳೆದು ಬುದ್ಧಿಶಕ್ತಿ ಹೆಚ್ಚಾಗಿ ಆತ್ಮಸ್ಥೈರ್ಯ, ಧೈರ್ಯ, ಸ್ಥೈರ್ಯ, ಹುಮ್ಮಸುಗಳು ಬೆಳೆಯುತ್ತವೆ. ಈ ಶಕ್ತಿಯನ್ನು ಅವರಿವರು ದಾರಿತೋರಿಸಲಿ ಕೆಲಸ ಕೊಡಲಿ, ಸಹಾಯ ಒದಗಿಸಲಿ ಎಂದು ಕಾಯುತ್ತಾ ಕುಳಿತು ವ್ಯರ್ಥಮಾಡುವುದೇಕೆ? ನಮ್ಮಲ್ಲಿ ಉದ್ಯೋಗಗಳಿಗೆ ಕಡಿಮೆಯೇ? ವಂಶಪಾರಂಪರ್ಯವಾಗಿ ಬಂದ ಕಸುಬುಗಳಿವೆ ವ್ಯವಸಾಯವಿದೆ, ಪಶುಪಾಲನೆಯಿದೆ, ವ್ಯಾಪಾರ, ವಾಣಿಜ್ಯ ಹೀಗೆ ಪಟ್ಟಿಮಾಡುತ್ತಾ ಹೋದರೆ ಯಾವುದಕ್ಕೆ ಕೊರತೆಯಿದೆ? ಕೊರತೆಯಿರುವುದು ಯುವಜನರ ಧೈರ್ಯಕ್ಕೆ, ಉತ್ಸಾಹಕ್ಕೆ, ಮುನ್ನುಗ್ಗುವಿಕೆಗೆ ತಮ್ಮ ತಮ್ಮ



ಜೀವನ ಮಾರ್ಗವನ್ನು ತಾವುತಾವೇ ರೂಪಿಸಿ ಕೊಳ್ಳಬೇಕಲ್ಲದೆ ಇನ್ನಾರು ರೂಪಿಸಿಯಾರು? ಇನ್ನು ಯಾರಾದರೂ ರೂಪಿಸಲಿ ಎಂದು ಕೇಳುವುದಾದರೂ ಸರಿಯೇ? ದೇಶದಲ್ಲಿ ಆಗುತ್ತಿರುವ ಅನಾಹುತಗಳಿಗೆಲ್ಲಾ ಇತರರನ್ನೇಕೆ ಬೊಟ್ಟುಮಾಡಿ ತೋರಿಸಬೇಕು? ಯುವಜನತೆ ತಮ್ಮ ಅಂತರಂಗ ಹಾಗೂ ತಮ್ಮ ಆತ್ಮ ಸಾಕ್ಷಿಯನ್ನು ತಾವೇ ಶೋಧಿಸಿಕೊಂಡರಾಗದೆ ?

ಯುವಜನತೆ ಸಕಾಲದಲ್ಲಿ ಎಚ್ಚೆತ್ತುಕೊಳ್ಳದಿದ್ದರೆ ಇನ್ನು ಎಷ್ಟುಮಂದಿ ಮೋದಿಗಳು, ರಾಜೀವ್‌ಗಾಂಧಿಗಳು, ಮನ್‌ಚಂದ್‌ಗಳು ಉಗ್ರಗಾಮಿಗಳ ಬರ್ಬರ ಕೃತ್ಯಕ್ಕೆ ಬಲಿಯಾಗಬೇಕಾಗುತ್ತದೋ ? ಬೊಂಬಾಯಿಯಲ್ಲಿ ಸರದಿಬಾಂಬ್‌ಹಾಕಿ ಎಸಗಿರುವ ದುಷ್ಕೃತ್ಯಗಳಂತಃ ಬರ್ಬರಕೃತ್ಯಗಳು ಮತ್ತೆಷ್ಟು ನಡೆಯುತ್ತವೆಯೋ (12.3.93) ಎಷ್ಟು ಮುಗ್ಧ ಜೀವಿಗಳು ಇಂತಹ ಹೀನಕೃತ್ಯಗಳಿಗೆ ಬಲಿಯಾಗ ಬೇಕಾಗುತ್ತದೆಯೋ ? ಯುವಜನತೆ ಮನಸ್ಸು ಮಾಡಿದರೆ ತಮ್ಮ ಆಗಾಧಶಕ್ತಿಯನ್ನು ಕ್ರಿಯಾತ್ಮಕವಾಗಿ ಸತ್ಕಾರ್ಯಗಳಿಗೆ ಬಳಸಿಕೊಳ್ಳಲು ಸಾಧ್ಯ.

ನಿಜ ನಮ್ಮ ದೇಶದಲ್ಲಿ ಜನಸಂಖ್ಯೆಯ ಹೆಚ್ಚಳದ ಕಾರಣದಿಂದ ಯುವಜನತೆಗೆ ದೊರೆಯಬೇಕಿರುವ ಅವಕಾಶಗಳು ದೊರೆಯುತ್ತಿಲ್ಲ. ಯುವಾವಸ್ಥೆಗೆ ಕಾಲಿಡುತ್ತಿದ್ದಂತೆಯೇ ಅನೇಕಸಮಸ್ಯೆಗಳು ಭೂತಾಕಾರವಾಗಿ ಅವರ ಎದುರಿಗೆ ನಿಲ್ಲುತ್ತವೆ. ಆಸಮಸ್ಯೆ ಸ್ವಲ್ಪಎಚ್ಚರತಪ್ಪಿದವರನ್ನು ನುಂಗಿನೀರುಕುಡಿದೇಬಿಡುತ್ತದೆ. ಹಾಗೆಂದ ಮಾತ್ರಕ್ಕೆ ಸಮಸ್ಯೆಗಳು ಬಗೆಹರಿಸಲು ಸಾಧ್ಯವೇ ಇಲ್ಲದಂತಹ ಸಮಸ್ಯೆಗಳೇನಲ್ಲ. ಯುವಜನತೆ ಬೆಳೆಸಿ. ಧೈರ್ಯ, ಸ್ಥೈರ್ಯ ಆತ್ಮವಿಶ್ವಾಸ, ವಿವೇಚನಾಶಕ್ತಿಗಳನ್ನು ಯುವಜನತೆ ಬೆಳೆಸಿಕೊಂಡರೆ, ನಿಶ್ಕ್ರಿಯತೆ, ಉದಾಸೀನತೆ, ಸೋಮಾರಿತನ ಇವುಗಳನ್ನು ಹೊಡೆದೋಡಿಸುವ ಚೈತನ್ಯ ಅವರಿಗೆ ಬಂದರೆ ಅವರ ಸಮಸ್ಯೆಗಳು ತನ್ನಿಂತಾನೇ ಕಡಿಮೆಯಾಗುತ್ತಾ ಬರುತ್ತವೆ.

ನಮ್ಮಲ್ಲಿರುವ ರಾಜಕೀಯ ವ್ಯವಸ್ಥೆ ಕೂಡ ಯುವಜನತೆಯನ್ನು ಅವಕಾಶದಿಂದ ವಂಚಿತರನ್ನಾಗಿ ಮಾಡುವ ರೀತಿಯದೇ ಆಗಿದೆ. ರಾಜಕೀಯಕ್ಕೆ ಸಂಬಂಧಿಸಿದ ಪ್ರಮುಖ ಹುದ್ದೆಗಳೆಲ್ಲಾ ಯುವಜನತೆಯ ಆಸಕ್ತಿ ಕಷ್ಟಸುಖಗಳಿಗೆ ಸ್ಪಂದಿಸಲಾರದ ಆಧುನಿಕ ಪ್ರಪಂಚದಲ್ಲಿ ಅವರ ನಿಜವಾದ ಬೇಕು ಬೇಡಗಳನ್ನು ಅರ್ಥಮಾಡಿಕೊಳ್ಳಲಾರದ ವಯೋವೃದ್ಧರ ಹಿಡಿತಕ್ಕೆ ಒಳಪಟ್ಟಿದೆ. ಆ ಜನರೋ ಮುಂದುವರಿದ ವೈಜ್ಞಾನಿಕ ಯುಗಕ್ಕೆ ಏಕಾಏಕಿ ಕಾಲಿಡಲಾರರು. ಕಾಲಿಡದೆಯೂ ಇರಲಾರರು. ಇಂತಹ ಸಂಕಟ ಸ್ಥಿತಿಯಲ್ಲಿ ಏನೂ ಮಾಡಲಾರರು ಮಾಡಲೂ ಇರಲಾರರು. ಹಾಗಾಗಿ ಅವರೂ ಒಂದು ರೀತಿಯ ಇಬ್ಬಂದಿತನವನ್ನು ಎದುರಿಸುತ್ತಿದ್ದಾರೆ. ತಮ್ಮಿಂದ ಸಾಧ್ಯವಾಗದ ಜವಾಬ್ದಾರಿಯನ್ನು ಯುವಜನತೆಯ ಹೆಗಲಮೇಲೆ ಹೊರಿಸುವ

ಧಾರಾಳತನ ಅವರಿಗಿಲ್ಲ. ಅವರಿಂದ ಜವಾಬ್ಧಾರಿಯನ್ನು ತಮ್ಮತ್ತ ಸೆಳೆದುಕೊಳ್ಳುವ ಸಾಮರ್ಥ್ಯ ಯುವಜನತೆಗಿಲ್ಲ. ಸ್ವಸಾಮರ್ಥ್ಯದಿಂದ ಯುವಜನತೆ ಈಹೊರೆಹೊತ್ತಲ್ಲದೆ ಸಮಸ್ಯೆಗೆ ಪರಿಹಾರವಿಲ್ಲ.

ನಮ್ಮ ಸಮಾಜದಲ್ಲಿರುವ ಮತ್ತೊಂದು ತೊಂದರೆಯೆಂದರೆವೃತ್ತಿಗೌರವದ ಅಭಾವ. ಯಾವುದೇ ರೀತಿಯ ಕೆಲಸವಾಗಲಿ ಅದಕ್ಕೆಸ ಮಾನಗೌರವ ದೊರೆಯುತ್ತಿಲ್ಲ ವೃತ್ತಿಗಳಲ್ಲಿ ಕೆಲವನ್ನು ಮೇಲೆಂದೂ, ಕೆಲವನ್ನು ಕೀಳೆಂದೂ ಭಾವಿಸಲಾಗುತ್ತಿದೆ, ಆ ಭಾವನೆತೊಲಗಿ ಕೆಲಸ ಯಾವುದಾದರೇನು? ಅದನ್ನು ಶ್ರದ್ಧೆಯಿಂದ ಮಾಡುವ ಪ್ರವೃತ್ತಿ ಬೆಳೆಯಬೇಕು. ಯಾವೊಬ್ಬ ವಿದ್ಯಾವಂತನೂ ನಾನು ಗ್ರಾಜುಯೇಟ್ ಅಥವಾ ವಿದ್ಯಾವಂತ. ನನ್ನ ಸ್ವೈ ಕೈ ಮಣ್ಣಾಗಬಾರದು ಎಂಬಭಾವನೆಯನ್ನು ತೊಡೆದುಹಾಕಿ ತನ್ನ ಪರಿಸರದಲ್ಲಿದೊರೆಯುವ ಉದ್ಯೋಗವನ್ನು ಯಾವ ಸಂಕೋಚವೂ ಇಲ್ಲದೆ ಮಾಡತೊಡಗಿದರೆ ಜೀವನಕ್ಕೆ ಉಪಾಯದೊರೆಯುತ್ತದೆ. ಪರಾವಲಂಬನೆ ತಪ್ಪುತ್ತದೆ, ಜೀವನೋಪಾಯದ ಸಮಸ್ಯೆಯೊಂದು ಬಗೆಹರಿದರೆ ಅಶಾಂತಿತೊಲಗಿ ಆತ್ಮವಿಶ್ವಾಸಬೆಳೆಯುತ್ತದೆ. ಕೆಟ್ಟಕೆಲಸಗಳತ್ತಗಮನಹರಿಸಲು ಸಮಯವಿಲ್ಲವಾಗುತ್ತದೆ. ಕೇವಲ ಜೀವನೋಪಾಯವೇ ಗುರಿಯಲ್ಲದವರಿಗೂ, ಸ್ವಸ್ಥಮನಸ್ಸು ಹಾಗೂ ಮಾನಸಿಕ ನೆಮ್ಮದಿಯ ಕಾರಣದಿಂದ ಉದಾತ್ತ ಧ್ಯೇಯಸಾಧನೆಗೆ ಧುಮುಕುವ ಅವಕಾಶ ದೊರೆಯುತ್ತದೆ. ಸ್ವಸ್ಥಮನಸ್ಸಿನ ಯುವಜನತೆಯ ಕಾರ್ಯದಕ್ಷತೆ ದೇಶದ ಶಾಂತಿ ಹಾಗೂ ಸುಭದ್ರತೆಗೆ ಸಹಾಯಕವಾಗುತ್ತದೆ.

ಹೀಗೆ ಯುವಜನತೆ ತಮ್ಮ ಜವಾಬ್ದಾರಿ ತಾವು ಅರಿತು ಸದಾಉಪಯುಕ್ತ ಕೆಲಸದಲ್ಲಿ ತೊಡಗುವಂತಾದರೆ, ವಿಧ್ವಂಸಕಕೃತ್ಯಗಳನ್ನು ಅವರೇ ಖಂಡಿಸುವಂತಾದರೆ,ಹಿಂಸೆ, ಕ್ರೌರ್ಯ ಕಡಿಮೆಯಾಗಿ ಯುವಸಾಮರ್ಥ್ಯಕ್ಕೆ ಹೊಸತಿರುವು ದೊರೆತು ಭಯೋತ್ಪಾದನೆ, ಉಗ್ರಗಾಮಿ ನೀತಿಗಳಂತಹ ದುಷ್ಟಶಕ್ತಿಗಳಿಗೆ ಎಡೆಯಿಲ್ಲದಂತಾಗಿ ದೇಶದ ಸರ್ವತೋಮುಖ ಪ್ರಗತಿಗೆ ಅವಕಾಶ ದೊರೆಯುತ್ತದೆ.

---

ಕಣ್ಣು ತೆರೆಯೆ ವಿಶ್ವಲಿಂಗ ದರ್ಶನ
ಉಸಿರಾಡಿಸೆ ವಾಯುಲಿಂಗ ದರ್ಶನ
ಹಸಿವಾಗೆ ಅಗ್ನಿಲಿಂಗದ ದರ್ಶನ
ತೃಷೆಯಾಗೆ ಜಲಲಿಂಗದ ದರ್ಶನ
ನಿದ್ದೆ ಬಂದೊಡೆ ನೆಲದ ಲಿಂಗವ ನೆನೆಪು ನೋಡಯ್ಯ
ಲಿಂಗಮಧ್ಯೆ ಜಗತ್ಸರ್ವಂ ಎಂಬುದು ನಿಜವಾದರೆ
ಎನ್ನನೇಕೆ ಲಿಂಗವಾಗಿಸಿಲ್ಲವಯ್ಯಾ
ಸ್ವತಂತ್ರ ಧೀರ ಸಿದ್ದೇಶ್ವರಾ. (ವ. ೧೪)

ಧಾರ್ಮಿಕ, ಆಧ್ಯಾತ್ಮಿಕ, ವೈಜ್ಞಾನಿಕ ಮತ್ತು ವೈಚಾರಿಕ

ಲೇಖನಗಳಿಗೆ

# 'ಸಿದ್ಧಗಂಗಾ' ಮಾಸಪತ್ರಿಕೆ ಓದಿರಿ.

ವಾರ್ಷಿಕ ಚಂದಾ 25/- ರೂಗಳು.

ಆಜೀವ ಸದಸ್ಯತ್ವ 300/- ರೂಗಳು.

'ಸಿದ್ಧಗಂಗಾ' ಜ್ಞಾನ ಕಿರಣಗಳು ನಿರಂತರವಾಗಿ ನಿಮ್ಮ ಮನೆ ತಲುಪಲು

ಆಜೀವ ಸದಸ್ಯತ್ವ ಪಡೆಯಿರಿ.

ಪ್ರಕಾಶಕರು.

# ಕರ್ನಾಟಕ ರಾಜ್ಯ

# ಕೃಷಿ ಮಾರಾಟ ಮಂಡಳಿ

16, 4ನೇ ರಾಜಭವನ ರಸ್ತೆ,

ಬೆಂಗಳೂರು—1.

"SIDDAGANGA" MONTHLY Reg. No. KRNQ-9



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ, 572104.